

# ಕವಿ-ವಿನಾಯಕ

## ಒನ್ನೋಟ ಚರಿತೆ

ನೆಗಳೂರ ರಂಗನಾಥ

ಪರಾಗ ಪ್ರಕಾಶನ
ಧಾರವಾಡ

# ಪ್ರಕಾಶಕರ ನುಡಿ



ಪರಾಗ ಪ್ರಕಾಶನ ಮೊದಲಾದದ್ದು ಶ್ರೀ ವಿ ಕೃ. ಗೋಕಾಕರ ದ್ಯಾವಾ-ಪೃಥಿವೀ' ಪ್ರಕಟನೆಯಿಂದ ಇಂದು ಅವರು ಬಳ್ಳಾರಿಯಲ್ಲಿ ನೆರೆಯುವ ೪೦ ನೇ ಕನ್ನಡ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾಗಿ ನಿಯೋಜಿತರಾಗಿದ್ದಾರೆ ಆ ಮಂಗಲ ಸಮಯದಲ್ಲಿ–ಕನ್ನಡ ಜನತೆಗೆ ಶ್ರೀ ಗೋಕಾಕರ ವಿರಾಟ್ ಜೀವನದ ರವಷ್ಟಾದರೂ ಕಲ್ಪನೆ ಬರಲಿ–ಎಂಬ ಆಶೆಯಿಂದ ಈ ಕೃತಿಯ ಪ್ರಕಟನೆಗೆ ತೊಡಗಿದ್ದೇವೆ. ಶ್ರೀ ನೆಗಳೂರ ರಂಗನಾಥರಾಯರು ಬರೆಯಲಿರುವ ಶ್ರೀ ಗೋಕಾಕರ ಜೀವನ ಚರಿತ್ರೆಯ ಬೃಹದ್-ಕೃತಿಗೆ ಇದು ಕೇವಲ ನಾಂದಿ.

ಈ ಕೃತಿಯನ್ನು ಅಲ್ಪಾವಕಾಶದಲ್ಲಿ ಒದಗಿಸಿ ಕೊಟ್ಟ ಬಗ್ಗೆ ಲೇಖಕರಾದ ಶ್ರೀ ನೆಗಳೂರ ರಂಗನಾಥರಾಯರಿಗೆ ಪರಾಗ ಪ್ರಕಾಶನ ಉಪಕೃತವಾಗಿದೆ

ಅಂತೆಯೇ ಲಲಿತ ಮುದ್ರಣಾಲಯದ ಶ್ರೀ. ಬಸವರಾಜ ಹೊರಡಿ ಅವರು ಹತ್ತೆಂಟು ದಿನಗಳ ಅವಧಿಯಲ್ಲಿ ಇದನ್ನು ಅಚ್ಚುಕಟ್ಟಾಗಿ ಅಚ್ಚಿಸಿ ಕೊಟ್ಟರು. ಅವರೂ ಅಭಿನಂದನಾರ್ಹರು.

**— ರಾಮಚಂದ್ರ ಕೊಟ್ಟಲಗಿ**
**— ಲಕ್ಷ್ಮಣರಾವ ಬೇಂದ್ರೆ**

# ಬರೆದವನು ಹೇಳಿದುದು



ಇದು ಒಂದು ದರ್ಶನ—ಸಂದರ್ಶನ. ಸಂದರ್ಶನದಿಂದ ಉಂಟಾದ ದರ್ಶನ ಸಮೀಪದ ಸಹವಾಸದಿಂದ— ಸಹ ಜೀವನದಿಂದ— ಸಹ ಯೋಗದಿಂದ ಜೀವನ ಸಾಮರಸ್ಯ ಉಂಟಾಗಿ ಅರಳಿಸಿದ ಜೀವನ ಚರಿತೆಯಲ್ಲ ಆ ಸಹಯೋಗವು ಸಾಕಷ್ಟು ಸಮಯ ದೊರೆಯದೆ ಇದ್ದುದಕ್ಕೆ ಮಾನಸಿಕ ವೇದನೆಯನ್ನು ಅನುಭವಿಸಿದ್ದೇನೆ ಆದರೆ, ಸಮೀಪ ಇದ್ದಷ್ಟು ಕಾಲ, ಬಿಚ್ಚು ಮನಸ್ಸಿನಿಂದ ಮಾತಾಡಿ ಹೃದಯಸ್ಪರ್ಶಿಯಾಗುವ ಹಾಗೆ ಚರ್ಚೆ ಮಾಡಿದ್ದರಿಂದ ಇಲ್ಲಿ ಬರುವ ಮಾತುಗಳು ಅರಿಯದವನು ಆಡಿದ ಮಾತುಗಳೆಂದು ಆಗಲಾರವು ಎಂದು ನಂಬಿಕೆಯಿದೆ. ಅದೇ ಕಾಲಕ್ಕೆ ತಿಳಿದವನ ಮಾತುಗಳೆಂದು ಹೇಳಿಕೊಳ್ಳುವ ಧೈರ್ಯ ನನಗೆ ಇಲ್ಲ. ಆದಕ್ಕೆ ಕಾರಣವಿದೆ. ಬೆಳೆವ ಜೀವಿಯ ವ್ಯಾಪ್ತಿಯನ್ನು ಆ ಜೀವಿಯೇ ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲದಿರುವಾಗ ದೂರದಲ್ಲಿ ನಿಂತು ಬಹಿರಂಗ ಜೀವನದಿಂದ, ಬರೆಹದ ಆಧಾರದಿಂದ ಅಂತರಂಗವನ್ನು ತಿಳಿಯಬಸುವವನ ತಿಳಿವಳಿಕೆ ಪೂರ್ಣ ತಿಳಿವಳಿಕೆ ಹೇಗಾದೀತು ? ಈ ಮಿತಿಯು ಈ ಚರಿತೆಗೆ ಇದೆ.

ಇಂತಹ ಮರ್ಯಾದಿತವಾದ ಚರಿತೆಯನ್ನು ಓದಿ. ಶ್ರೀ. ಗೋಕಾಕರ ಸಹವಾಸ-ಸ್ನೇಹವನ್ನು ಬಯಸುವಂತಾದರೆ, ಮತ್ತು ಅದರ ಜತೆಗೆ ಅವರ

ಸಾಹಿತ್ಯ ಕೃತಿಗಳ ಬಗ್ಗೆ ಸಹೃದಯತೆ ಉಂಟಾದರೆ, ನನ್ನ ಪ್ರಯತ್ನದ ಸಾರ್ಥಕ್ಯವಾಯಿತೆಂದು ನಾನು ತಿಳಿಯುತ್ತೇನೆ ಈ ಅಲ್ಪ ಸಂತುಷ್ಟಿಯು ಈಗಿನ ಸಮಯಾಭಾವದ ಮೂಲಕವಾಗಿ ಎಂದು ಹೇಳಲೇಬೇಕು. ವ್ಯಾಪಕವಾಗಿ ವಿವಿಧ ಮುಖವಾಗಿ ಸಾಹಿತ್ಯ ನಿರ್ಮಿತಿ ಮಾಡಿದ ಕವಿಯ ಜೀವನಾಂತರಂಗ ಪ್ರಜ್ಞಾವಿಕಾಸವನ್ನು ಅನುಭವ ಜನ್ಯವಾದ ಸಂಗತಿಗಳಿಂದ–ಸಂಕೇತಗಳಿಂದ ಅನುಭಾವಾತೀತವಾದ ಮನೋವ್ಯಾಪಾರವನ್ನು ತಿಳಿಯಲು ವಿಶಾಲವಾದ ಚರಿತೆ; ವಿಮರ್ಶಾತ್ಮಕವಾದ ಬರವಣಿಗೆ ಅತ್ಯಗತ್ಯ ಅದು ಸದ್ಯಕ್ಕೆ ಸಾಧ್ಯವಾಗಲಿಲ್ಲವೆಂಬ ಕೊರತೆ ಅನಿಸಿದೆ. ಆ ಕೊರತೆಯು ಸಕಾಲದಲ್ಲಿ ನೀಗಬಹುದೆಂಬ ಹಾರೈಕೆಯೂ ಇದೆ. ಅದಕ್ಕೆ ಇದೊಂದು ನಾಂದಿಯಾಗಿ ಪರಿಣಮಿಸಬಹುದು ಎಂದೇ ಈ ಚಿಕ್ಕ ಚರಿತೆ ಬರೆದವನಿಗೆ ಹೇಳಲೇಬೇಕಾದ ಮಾತು.

ಶಾಂತಿರಂಗ, ಸಾಧನಕೇರಿ
ಧಾರವಾಡ ೨೮-೧೨-೫೭

**ನೆಗಳೂರ ರಂಗನಾಥ**

# ಪರಿವಿಡಿ

# ಅರ್ಪಣೆ

—*—

'ಕನ್ನಡದ ಶಬ್ದಮೆನಗೋಂಕಾರ' ಎಂದವರು
ಕನ್ನಡದ ಶ್ರೀಕಾರವೆನಗಿತ್ತರು.
ಗುರುತರದ ಹೊಣೆಯನ್ನು ಗುರುವಾಗಿ ತೋರಿದರು.
ಗರುವವನು ವಿನಯದಲಿ ಬದಲಿಸಿದರು.

ಕರುಣೆ ತಾ ಮೈವೆತ್ತು ರೂಪವನು ತಳೆದಿದ್ದು
ಜೀವದುಸಿರನು ಹನಿಸಿ ತೀರ್ಥವಾಗಿ
ಬೆಳೆದಿರುವ **ಶ್ರೀ ಸಾಲಿ ರಾಮಚಂದ್ರಂಗಿದನು**
ಅರ್ಪಿಸುವೆನಾದರದಿ ತಲೆಯ ಬಾಗಿ

೧೦-೧-೧೯೫೮

**—ನೆಗಳೂರ ರಂಗನಾಥ**

## ಪರಾಗ ಪ್ರಕಾಶನದ ಪ್ರಕಟನೆಗಳು



ದ್ಯಾವಾ ಪೃಥಿವೀ

ಪಡೆದು ಬಂದಿರಬೇಕು.

ಕನ್ನಡ ಸಾಹಿತ್ಯ ದರ್ಶನ 1956.

ಮುರಾರೀ ವಾಙ್ಮಯ ಪರಿಚಯ.

## ನೆಗಳೂರ ರಂಗನಾಥರ ಕೃತಿಗಳು



ಬಹಿಷ್ಕಾರ
ಮದುವೆ
ಶ್ರೀರಂಗ
ನಾಳಿನ ಹಂಣು
ಪೂಜಾಫಲ
ರಾಜ್ಯಘಟನೆಯ ಕರಡು
ಪ್ರಥಮ ಪಂಚ-
-ವಾರ್ಷಿಕ ಯೋಜನೆ
ಪೌರನೀತಿ
ಇಂಡಿಯನ್ ಪಿನಲ್ ಕೋಡ
ಪುರಾವೆ ನೀತಿ
ಪಾನಪ್ರತಿಬಂಧ
ವಾರಸದಾರ
ಭಾರತದಲ್ಲಿ ಪ್ರಜಾಪ್ರಭುತ್ವ
ಪ್ರಾಯವ್ಹೇಟ
ಇಂಟರನ್ಯಾಶನಲ್ ಲಾ
Hubli

# ಕವಿ-(ವಿ)-ನಾಯಕ

## ೧

### ಕವಿ-ಕಾವ್ಯ

ಕವಿ ವಿನಾಯಕ. ವಿನಾಯಕ ಕವಿ. ಕವಿಯು ನಾಯಕ. ಕವಿ ಎಂಬ ಪದವನ್ನು ಪೂರ್ಣ ಅರ್ಥದಲ್ಲಿ ಉಪಯೋಗಿಸಲಾಗಿದೆ. ಕವಿಯು ಸರ್ವಜ್ಞನು. ಕವಿಯು ಸೃಷ್ಟಿಕರ್ತನು. ಕವಿಯು ಋಷಿಯು, ದೃಷ್ಟಾರನು, ದಾರ್ಶನಿಕನು. ಕವಿಯು ವಿದ್ವಾಂಸನು, ಪಂಡಿತನು, ಜ್ಞಾನಿಯು. ಕವಿಯು ಶಿಕ್ಷಕನು.

ಕವಿಯು ಸಾಮಾನ್ಯನಲ್ಲ, ಎಂಬುದು ಕವಿ ಎಂಬ ಪದದ ವ್ಯಾಪಕಾರ್ಥವನ್ನು ನೋಡಿದರೆ ತಿಳಿವುದು. ಕವಿ ವಿನಾಯಕ. ವಿನಾಯಕ ಎಂಬ ಹೆಸರಿನಲ್ಲಿ ಎಷ್ಟು ಅರ್ಥ ಹುದುಗಿದೆ! ವಿನಾಯಕ ಎಂಬ ಹೆಸರು ವಿಘ್ನೇಶ್ವರನಾದ ಗಣಪತಿಯ ಒಂದು ಹೆಸರು. ವಿಘ್ನಗಳು ಇಲ್ಲದಂತೆ—ವಿನಾಯ—ಮಾಡುವವನು ವಿನಾಯಕನು. ಪಕ್ಷಿಗಳಲ್ಲಿ ಹಿರಿಯನಾದ ಗರುಡನು. ವಿ—ನಾಯಕನು ವಿಶೇಷ ನಾಯಕನು. ನಾಯಕ ಎಂದು ಕರೆಯಿಸಿಕೊಳ್ಳುವವನು ಮುಂದಾಳು. ಮುಂದೆ ಇರುವವನು ಮುಂದಾಳು; ಆಹುದಾದರೂ ಮುಂದಾಗುವುದನ್ನು ತಿಳಿಯುವವನು ಮುಂದಾಳು. ಅದಕ್ಕಾಗಿ ಅವನು ಮಾರ್ಗದರ್ಶಕನು. ಮಾರ್ಗದರ್ಶಕನು ಆಗಿರುವವನು ಮಾರ್ಗವನ್ನು ಕಂಡಿರುವವನು. ಮಾರ್ಗ ಕಾಣದವರಿಗೆ ಮಾರ್ಗ ತೋರಿಸುವವನು. ಅದಕ್ಕೆ ಅವನು ದಾರ್ಶನಿಕನು; ದೃಷ್ಟಾರನು. ಈ ಸಂದರ್ಭದಲ್ಲಿ ಅವನಿಗೆ ಋಷಿ ಎಂದರೆ ಯಾರೂ ಬೆಚ್ಚಿ ಬೀಳಲಿಕ್ಕಿಲ್ಲ. ಬೆಚ್ಚಿ ಬೀಳುವ ಸ್ವಭಾವವನ್ನು ಬೆಳೆಯಿಸಿಕೊಂಡು ಬಂದವರು ಋಷಿ ಶಬ್ದಕ್ಕೆ ಕಾಲ-ಸೀಮೆ-ಸಂದರ್ಭವನ್ನು ಮಾತ್ರ ಕಂಡುಕೊಂಡು ಅದರಲ್ಲಿಯ ಸಾರ್ವಕಾಲಿಕ ಸಾತ್ವಿಕ ಅರ್ಥವನ್ನು ಮರೆತುಬಿಟ್ಟಿರುತ್ತಾರೆ. ಈ ಮರವೆಯು ಗುಣಗ್ರಾಹಕತನವನ್ನು ಕಡಮೆ

ಮಾಡಿ ರೂಪದರ್ಶನದಿಂದ ಗುರುತಿಸುವ ರೂಢಿಯನ್ನು ಹಾಕಿಕೊಳ್ಳುವದು. ಋಷಿ, ಅಂದು ಪವಿತ್ರಸ್ಥಾನವನ್ನು ಗುರುತ್ವ ಸ್ಥಾನವನ್ನು ಪಡೆದಿದ್ದನು. ಈ ಪಾವಿತ್ರ್ಯವಾಗಲೀ ಗುರುತ್ವವಾಗಲೀ ಅವನಿಗೆ ಬಂದಿದ್ದರೆ, ಅದಕ್ಕೆ ಕಾರಣ ಅವನು ಬಾಳಿದ ಪ್ರಾಚೀನ ಕಾಲವಾಗಲೀ ಇರುವಂತಹ ಆಶ್ರಮ ವಾತಾವರಣವಾಗಲೀ ಧರಿಸಿರುವ ಜಟಾ-ಕಾಷಾಯಗಳಾಗಲೀ ಕಾರಣ ವಾಗಿರಲಿಲ್ಲ. ಅವನ್ನು ಬೇರೆ ಯಾರೂ ಧರಿಸಿದ ಮಾತ್ರಕ್ಕೆ ಅವರು ಋಷಿ ಯಾಗುತ್ತಿರಲಿಲ್ಲ. ಋಷಿಯಲ್ಲಿಯ ಗುಣವೇ ಅವನ ಋಷಿತ್ವಕ್ಕೆ ಕಾರಣ. ಋಷಿಯು ಗುರುವು ಋಷಿಯು ದಾರ್ಶನಿಕನು. ಋಷಿಯು ಕವಿಯು. ಮುಂದಾಗುವುದನ್ನು ಇಂದೇ ತಿಳಿದು ತಿಳಿಯದವರಿಗೆ ತಿಳಿವಳಿಕೆ ಮಾಡಿ ಕೊಡುವ ಮುಂದಾಳು, ಎಂದೇ ಅಂದಿನ ಯೋಗ್ಯತಾವಂತ ಋಷಿಗಳ ಹೆಸರು ಇಂದಿಗೂ ಹೇಳಿಕೊಂಡು, ಗುರುಬಂಧುತ್ವದ ಬಾಂಧವ್ಯವನ್ನು ಕಲ್ಪಿಸಿ ಕೊಂಡು ಒಂದೆಂಬ ಭಾವನೆಯನ್ನು ಮೂಡಿಸಿಕೊಂಡು ಪರಂಪರೆಯನ್ನು ಮುಂದರಿಸಬೇಕೆಂದು ಬಯಸುವೆವು ಗೋತ್ರಋಷಿಯಾಗಿ ಜೀವನ ನಡೆ ಯಿಸಿದವನು ಸಾಮಾನ್ಯನೆಂದು ಯಾವ ಧೈರ್ಯದಿಂದ ಯಾರು ಹೇಳುವರು? ಗುಣವೇ ಗೌರವ ಸ್ಥಾನ. ಗುಣವು ಅಂತರಂಗದ ಸತ್ವ. ಅದಕ್ಕೆ ಕವಿಯ ಯೋಗ್ಯತೆ ದೊಡ್ಡದು.

ಕವಿಯು ರವಿಯಕಿಂತಲೂ ದೊಡ್ಡವನು. ಕವಿ ಕಂಡದ್ದು ರವಿ ಕಾಣನು. ರವಿ ಕಾಣದ್ದು ಕವಿ ಕಾಣುವ. ರವಿಯು ಜೀವದಾನಿ. ಕವಿಯು ಜೀವನ ಸ್ಫೂರ್ತಿದಾನಿ. ರವಿಯು ಕಾಣುವುದು ತನ್ನ ಕಿರಣಗಳಿಂದ. ಕಿರಣ ಗಳಿಗೆ ಅಡ್ಡಿಯಾಗುವ ಸಾಮಾನ್ಯ ಒಂದು ಗೋಡೆಯಾಚೆ ಇರುವುದನ್ನು ರವಿ ಕಾಣಲಾರ. ಹೃದಯಾಂತರಾಳದಲ್ಲಿರುವುದನ್ನು ರವಿಯು ಹೇಗೆ ಕಂಡಾನು ? ಅದನ್ನು ಕವಿಯು ಕಾಣುತ್ತಾನೆ. ಉದಯವಾಗುವ ತನಕ ರವಿಗೆ ಹೊಸದೊಂದು ದಿನವೆಂಬುದಿಲ್ಲ. ಉದಯದ ಮೊದಲು ಆ ದಿನದಲ್ಲಿ ನಡೆವ ಸಂಗತಿಯನ್ನು ಕಾಣಲಾರ. ಕವಿ ಹಾಗಲ್ಲ. ಇನ್ನೂ ಉದಯ ವಾಗದ—ಮುಂದೆ ಎಷ್ಟೋ ಕಾಲದ ನಂತರ ಉದಯವಾಗುವ ದಿನಗಳ— ಬಗ್ಗೆ ಮುಂಧೋರಣದಿಂದ, ದಾರ್ಶನಿಕ ದೃಷ್ಟಿಯಿಂದ, ಭವಿಷ್ಯವಾದಿಯಂತೆ ಸ್ಪಷ್ಟ ಚಿತ್ರವನ್ನು ಕೊಡಬಲ್ಲ. ಈ ಶಕ್ತಿ ರವಿಗೆ ಇಲ್ಲ. ಹಾಕಿಕೊಟ್ಟ ಮಾರ್ಗ

ದಲ್ಲಿ ಚಲಿಸುವವನು ಅವನು. ಚಲಿಸಲಿಕ್ಕೆ ಮಾರ್ಗವನ್ನು ಹಾಕಿಕೊಡುವ ಯೋಗ್ಯತೆಯುಳ್ಳವನು ಕವಿಯು. ಇದ್ದ ಸೃಷ್ಟಿಗೆ ಬೆಳಕು ಕೊಡುವವನು ರವಿ; ಹೊಸ ಸೃಷ್ಟಿಯನ್ನೇ ನಿರ್ಮಾಣಮಾಡಿ ಬೆಳಕು ತೋರುವವನು ಕವಿ. ಕವಿಯು ಅದಕ್ಕೆ ಸೃಷ್ಟಿಕರ್ತನೆಂದು ಹೆಸರು ಪಡೆದಿರುವನು. ಅವನ ಕಾರ್ಯ ವ್ಯಾಪ್ತಿ ಬಹುದೊಡ್ಡದು. ಅವನ ಹೃದಯ ಬಹು ದೊಡ್ಡದು.

'ಕವಿ ಹೃದಯೇಷು ಅನಸೂಯಾ' ಎಂದರು ಕವಿಯನ್ನು ಗುರುತಿಸಿವವರು ಹೃದಯ ವೈಶಾಲ್ಯವು ಕವಿಯ ಗುಣ; ಸಂಕುಚಿತ ಮನೋಭಾವನೆಗೆ ಅಲ್ಲಿ ಎಡೆಯಿಲ್ಲ. ಸ್ವಾರ್ಥಕ್ಕೆ ಅಲ್ಲಿ ಇಂಬು ಇಲ್ಲ. ಸ್ವಾರ್ಥಿಯಾದವನಿಗೆ ಇತರರನ್ನು ಕಂಡರ ಅಸೂಯೆ. ಕವಿ ಹೃದಯದಲ್ಲಿ ಅಸೂಯೆ ಹೋಗಲಾರದು. ಅಸೂಯೆ ಇಲ್ಲದಿರುವುದರಿಂದ ಕವಿಗೆ ಯಥಾರ್ಥತೆಯ ಅರಿವಾಗುವುದು. ಕವಿಯು ಸತ್ಯವನ್ನು ಕಾಣುವವನು. ಸೌಂದರ್ಯವನ್ನು ಕಾಣುವವನು. ಒಳ್ಳೆಯದನ್ನು ಕಾಣುವವನು. ಸೌಂದರ್ಯದ ದೃಷ್ಟಿಯಿಂದ ಸತ್ಯವನ್ನು ಶುಭವನ್ನು ಕಾಣುವ ಯೋಗ ಕವಿಗೆ ಇದೆ. ಕವಿಯು ಸತ್ಯದ ಉಪಾಸಕನು. ಸೌಂದರ್ಯದ ಉಪಾಸಕನು. ಕಲೆಯ ಉಪಾಸಕನು ಇತರರಿಗೆ ಸತ್ಯದ ದರ್ಶನವನ್ನು, ಕಲಾಭಿರುಚಿಯನ್ನು ಸೌಂದರ್ಯಾಭಿರುಚಿಯನ್ನು ಮಾಡಿಸುವವನು.

ಕವಿಯು ಜ್ಞಾನಿಯು. ಅವನು ತ್ರಿಕಾಲ ಜ್ಞಾನಿಯು. ಆಗು ಹೋಗುಗಳ ಗುರುತು ಅವನಿಗೆ ಇದೆ; ಆಗುತ್ತದೆ. ಸಾಮಾನ್ಯನಿಗೆ "ಹಿಂದೆಸೆಯ ಬಾಗಿಲಿನ ಬೀಗಕ್ಕೆ ಕೈಯಿಲ್ಲ; ಮುಂದೆಸೆಯ ತೆರೆಯತ್ತಿ ನೋಡಲಳವಿಲ್ಲ." ಇಂದಿನದನ್ನು ಅರಗಿಸಿಕೊಳ್ಳುವ ಎದೆಗಾರಿಕೆಯಿಲ್ಲ. ಬಾಳುವೆಯಲ್ಲಿ ಬೆಂದ ಮಾನವನಿಗೆ ಧೈರ್ಯವನ್ನು ಸ್ಥೈರ್ಯವನ್ನು ತಿಳಿವಳಿಕೆಯನ್ನು ಬೆಳಕನ್ನು ತಂದುಕೊಡುವನು ತ್ರಿಕಾಲ ಜ್ಞಾನಿಯಾದ ಕವಿಯು. ಇಂತಹ ಕವಿಯು ವಿದ್ವಾಂಸನು. ಜ್ಞಾನಿಯಾದವನೇ ನಿಜವಾದ ವಿದ್ವಾಂಸನು. 'ಜ್ಞಾನ ವಿದ್ಯಾ ವಿಹೀನಸ್ಯ ವಿದ್ಯಾಜಾಲಂ ನಿರರ್ಥಕಂ' ಎಂದು ಸುಭಾಷಿತಕಾರರು ಹೇಳಿದ್ದಾರೆ. ನಿರರ್ಥಕವಾದ ವಿದ್ಯಾಜಾಲವು ಬುದ್ಧಿಗೆ ತೊಡಕು; ಕಾಲ್ತೊಡಕು. ಯಾರಿಗೆ ವಿದ್ವಾಂಸನೆಂದು ಕರೆಯಬೇಕು ಎಂದು ಈ ಮಾತಿನಲ್ಲಿ ಹೇಳಲಾಗಿದೆ:

ಸತ್ಯಂ ತಪೋ ಜ್ಞಾನಮಹಿಂಸತಾ ಚ
ವಿದ್ವತ್ ಪ್ರಣಾಮಂ ಚ ಸುಶೀಲತಾ ಚ ।
ಏತಾನಿ ಯೋ ಧಾರಯತೆ ಸ ವಿದ್ವಾನ್
ನ ಕೇವಲಂ ಯಃ ಪಠತೆ ಸ ವಿದ್ವಾನ್ ॥

ವಿದ್ವಾಂಸನೂ ಪಂಡಿತನೂ ಅಸೂಯಾ ರಹಿತನೂ ಸೃಷ್ಟಿಕರ್ತನೂ ದೃಷ್ಟಾರನೂ ಗುರುವೂ ಸರ್ವಜ್ಞನೂ ಮಾರ್ಗದರ್ಶಕನೂ ಮುಂದಾಳುವೂ ಭವಿಷ್ಯವಾದಿಯೂ ಆದವನು ಕವಿಯು. ಕವಿಯು ಮಾನವ ಕುಲಕ್ಕೆ ಶಾಸನ ಕರ್ತನು, ಎಂಬುದು ಇಂಗ್ಲಿಷಿನ ಈ ಮಾತಿನಲ್ಲಿ ಅಡಕವಾಗಿದೆ. Poets are the unacknowledged Legislators of the world.

ಆದ್ದರಿಂದ ಕವಿಯು ದೊಡ್ಡವನು; ಅಸಾಮಾನ್ಯನು. ಅಂತರಂಗದ ಸತ್ವವೇ ಕವಿಯನ್ನು ತೋರುವುದು. ಸತ್ವವು ಜನ್ಮತಃ ಬಂದುದು. ಸಂಸ್ಕಾರವು ವಾತಾವರಣ ಜನ್ಯವಾದುದು. ಅದಕ್ಕೆಂದೆ, a poet is born not made, ಎಂಬ ಹಳಿಯು ಲ್ಯಾಟಿನ್ ಪದದಲ್ಲಿ ಹೇಳಲಾಗಿದೆ. (Poeta nascitur, non fit ). ಇದರ ಸತ್ಯತೆಯು ಕವಿಯಲ್ಲಿ ಕಾಣುವುದು. ಕವಿಗೆ ಆವಶ್ಯಕವಾದ ಗುಣಧರ್ಮವೆಂದರೆ ಹೃದಯವಂತಿಕೆ; ಅಂತಃಕರಣ. ಈ ಸಂದರ್ಭದಲ್ಲಿ ಇನ್ನೊಂದು ಇಂಗ್ಲಿಷ ಪದ್ಯವು ನೆನಪಿಗೆ ಬರುವುದು. (R. W. Gilder, in wanted a theme.)

"Give me a theme" the little poet cried
"And I will do my part"
"It is not a theme you need" the world replied
"you need a heart."

ಕವಿಗೆ ವಸ್ತು ಮುಖ್ಯವಲ್ಲ; ಹೃದಯವಂತಿಕೆ ಮುಖ್ಯ. ಹೃದಯದ ಮಾತು ಬುದ್ಧಿಯೊರೆಗಲ್ಲಿನಲ್ಲಿ ತಿಕ್ಕಿ ಬಂದ ತರ್ಕದ ಮಾತು ಅಲ್ಲ. ಅದು ಕೇವಲ ಹೃದಯದ ಮಾತು. ಗಂಡು ಹೆಣ್ಣಿನ ಕಡೆಗೆ ನೋಡಿದ ರೀತಿಯಲ್ಲಿ ಕಂಡು ಬರುವ ಮಾತು; ತಾಯಿ ಮಗುವಿನ ಕಡೆಗೆ ನೋಡಿದ ರೀತಿಯಲ್ಲಿ ಎದ್ದು ಬರುವ ಮಾತು; ದೇವ ಭಕ್ತನೆಡೆಗೆ ತೋರುವ ವಾತ್ಸಲ್ಯದಲ್ಲಿ ಹುದುಗಿದ ಮಾತು. ಇಂತಹ ಸಂದರ್ಭದಲ್ಲಿ ಮಾತು ಬಾರದು. ಬಂದ ಮಾತುಗಳು

ಮೂಲ ಸತ್ವವನ್ನು ತಿಳಿಸಲಾರವು. ಮಾತಿಗೆ ಆ ಮಿತಿಯಿದೆ. ಸಂಕೇತವೇ ಸತ್ವವನ್ನು ಪ್ರತಿಬಿಂಬಿಸುವುದು. ಹೃದಯದ ಮಾತು ಸಾಂಕೇತಿಕ ಮಾತು. ಅದು ಹೃದಯವಂತಿಕೆ ಇದ್ದಲ್ಲಿ ಮಾತ್ರ ಅರ್ಥವಾಗುವುದು. ಅದಕ್ಕೆ ಹೀಗೆ ಹೇಳಿಯದೆ :

" ಕವೇರಭಿಪ್ರಾಯಂ ಅಶಬ್ದ ಗೋಚರಂ. "

ಅಶಬ್ದ ಗೋಚರವಾದ ಅಭಿಪ್ರಾಯವು ಕವಿಯ ಹೃದಯದಿಂದ ಉಂಟಾದ ಸಾಂಕೇತಿಕ ರೂಪದಲ್ಲಿ ಕಂಡು ಬಂದ ಭಾವನಾತ್ಮಕವಾದ ಶಬ್ದ ಸಮುಚ್ಚಯವು. ಶಬ್ದವು ಅರ್ಥಗರ್ಭಿತವಾದುದು. ಈ ಗರ್ಭಿತಾರ್ಥದ ಅನುಭವವು ಕವಿಗೆ ಆಗಿರುವುದು. ಅನುಭವದ ಪ್ರಕಟನೆಯು ಸಾಂಕೇತಿಕ ರೂಪದಲ್ಲಿ ಬಂದಿರುವುದು ಅನುಭವಕ್ಕೆ ಇಂತಹದೇ ವಸ್ತು ಬೇಕೆಂದು ಇಲ್ಲ. ವಿಶ್ವ ವಿಶಾಲದಲ್ಲಿಯ ಯಾವುದೊಂದು ವಸ್ತುವೂ ಅಂತಃಕರಣದ ಪ್ರವೃತ್ತಿಯನ್ನು ಅರಳಿಸಬಹುದು. ಅದುವರೆಗೆ ಅವ್ಯಕ್ತವಾಗಿ ಅಡಗಿದುದು ಕವಿಯ ಹೃದಯದ ಪ್ರತಿಕ್ರಿಯೆಯ ಮೂಲಕ ವ್ಯಕ್ತವಾಗಿ ರೂಪಪಡೆದು ನಿಶ್ಚಿತ ನಿತ್ಯ-ಚಿರಂತನ-ಅವತಾರ ಪಡೆವುದು. ಪ್ರಪಂಚದ ಮಹಾಕವಿಗಳಲ್ಲಿ ಒಬ್ಬನಾದ ಶೆಕ್ಸಪಿಯರನು ಈ ಬಗ್ಗೆ ಹೀಗೆ ನುಡಿದಿದ್ದಾನೆ:

A poets' eye ... ... ... . ..
Doth glance from heaven to earth, from earth
to heaven;
And imagination bodies froth,
The forms of thing, unknown, the poets' pen
Turns theme to shapes and gives to airy nothing
A local habitation and a name.

ಆಗ ಕವಿಯ ಕೃತಿಯು ಒಂದು ಕಾವ್ಯವಾಗುವುದು. ಕಾವ್ಯವೆಂದ ಕೂಡಲೆ ಕಾವ್ಯಂ ಆನಂದಾಯ; ರಸಾತ್ಮಕಂ ಕಾವ್ಯಂ ಎಂಬ ವ್ಯಾಖ್ಯೆಗಳು ಕಣ್ಣು ಮುಂದೆ ಬರುವುವು. ಆನಂದವಾಗಲೀ ರಸಾತ್ಮಕತೆಯಾಗಲೀ ಕಾವ್ಯದ ಗುಣಗಳಲ್ಲಿ ಮುಖ್ಯವಾದವು. ಆದರೆ ಆನಂದವು ಯಾರಿಗೆ ಯಾತರಿಂದ ಉಂಟಾಗುವುದು ಎಂಬುದನ್ನು ಹೇಳುವುದು ಕಠಿಣ. ಓದುಗನ ರುಚಿ ಮತ್ತು ಅಭಿರುಚಿಯ ಸಂಸ್ಕೃತಿಯ ಮೇಲೆ ಅವನಿಗೆ ಆನಂದವಾಗುವ ಕಾರಣವು

ಅವಲಂಬಿಸಿರುತ್ತದೆ. ರಸಾತ್ಮಕತೆಯಲ್ಲಿ ನವರಸಗಳೇ ಇರಬೇಕೆಂಬ ಅಭಿಪ್ರಾಯವು ಕಂಡು ಬಂದರೂ ಅಂದಿನ ನವರಸಗಳ ವ್ಯಾಪ್ತಿಯಲ್ಲಿ ಇಂದು ಬದಲಾವಣೆಯಾಗಿದೆ. ನವರಸಗಳು ಮೂಲ ಗುಣಗಳಾದ ತ್ರಿಗುಣಗಳಾದ ಸತ್ವ-ರಜ-ತಮಸ್ಸುಗಳ ಪದರುಗಳಿಗೆ ಆಗರಗಳಾಗಿವೆಯೆಂದು ಒಪ್ಪಿದರೆ ಇಂದಿಗೂ ನವರಸಗಳ ಉಪಯೋಗ ಕಾವ್ಯಗಳಲ್ಲಿ ಆಗಿರುವುದುಂಟು. ರಸಾನುಭೂತಿಯೂ ಓದುಗಸಿಗೆ ಆಗುವುದು. ಯಾವ ಯಾವ ರಸಗಳು ಕಾವ್ಯದಲ್ಲಿವೆಯೆಂಬುದು ಪಂಡಿತರು ನಿರ್ಣಯಿಸುವ ಕೆಲಸ. ಕಾವ್ಯವು ಕವಿಯ ಕೆಲಸ ಎಂಬುದು ಈ ಮಾತಿನಿಂದ ಹೊಳೆವುದು.

ಕವಿ ಕರೋತಿ ಕಾವ್ಯಾನಿ ರಸಂ ಜಾನಂತಿ ಪಂಡಿತಾ:

ಕಾವ್ಯವು ಹೃದಯವಂತಿಕೆಯಲ್ಲಿ ಉಗಮವಾಗಿರುವುದು; ವಿಮರ್ಶೆಮಾಡುವ ಪಂಡಿತನು ಕವಿಯ ಸಮಾನ ಹೃದಯದವನಾಗಿ ಕಾವ್ಯದಲ್ಲಿಯ ಗುಣವನ್ನು ಗುಣಗ್ರಾಹಿಗಳಿಗೆ ವಿವರಿಸುವನು. ಹಾಗೆ ರಸವನ್ನು ತಿಳಿವವನು ಪಂಡಿತನು. ಗುಣಗ್ರಾಹಕತನವು ಪಂಡಿತನ ಧರ್ಮ. ಗುಣವನ್ನು ಎತ್ತಿ ತೋರುವಾಗ ದೋಷಗಳನ್ನು ಹೇಳುತ್ತಾನೆ. ಅವು ದೋಷಗಳು ಅಹುದೆ? ಎಂಬ ಪ್ರಶ್ನೆಯು ಆಗಾಗ ಮುಂದೆ ಬರುವುದು ದೋಷಗಳೆಂದರೆ ವಸ್ತು-ವಿಷಯ-ವಿನ್ಯಾಸಗಳಲ್ಲಿ ಸಾಮರಸ್ಯವಿಲ್ಲವೆಂಬುದು, ಕವಿಯು ರಚನೆ ಮಾಡುವಾಗ ಭಾವುಕನಾಗಿರುವನು; ಅನುಭವವನ್ನು ಪಡೆಯುತ್ತಿರುವನು; ರಸಾನುಭೂತಿ, ಜೀವನಾನುಭೂತಿಗಳ ಸೆಳವಿನಲ್ಲಿ ಸಿಕ್ಕಾಗ ಅವನಿಗೆ ಆಗುವ ದರ್ಶನವನ್ನು ಅವನು ಕಾವ್ಯದಲ್ಲಿ ಮೂಡಿಸಿರುವನು. ಹೀಗಾಗಿರುವಾಗ ಅವನ ದೃಷ್ಟಿಯಲ್ಲಿ ಕಾವ್ಯರಚನೆಯು ಅವನ ಅನುಭವದ ಭಾವನೆ-ಅವುಗಳಿಂದುಂಟಾಗುವ ವಿಚಾರ ವೈಖರಿ. ಇವುಗಳನ್ನು ಪ್ರತಿಬಿಂಬಿಸುತ್ತಿರುವಾಗ ದೋಷಗಳ ಮಾತೆಲ್ಲಿ ಬರುವುದು. ಓದುಗರ ಅಭಿರುಚಿಯು ವಿವಿಧವಾಗಿದ್ದು ಎಲ್ಲವೂ ಎಲ್ಲರಿಗೆ ಸಮಾನ ಪ್ರತ್ಯಾನುಭವವನ್ನು ಕೊಡುವುದಿಲ್ಲವಾದ್ದರಿಂದ ಒಮ್ಮೊಮ್ಮೆ ವಿಮರ್ಶಕರಿಗೆ ದೋಷಗಳು ಕಾಣುವುವು. ದೋಷಗಳು ದೋಷಗಳಲ್ಲ. ಕಾರಣವೆಂದರೆ, ರಚನೆ ಮಾಡುವ ಕವಿಯ ದೃಷ್ಟಿಯು ವಿಮರ್ಶಕನಿಗೆ ಬರುವುದು ಸಾಧ್ಯವಿಲ್ಲ; ವಿಮರ್ಶಕನ ದೃಷ್ಟಿ ಕವಿಗೆ ಬರುವುದು ಶಕ್ಯವಿಲ್ಲ. ಕವಿಯು ಕನ್ಯೆಯ ತಂದೆಯಂತೆ; ವಿಮರ್ಶಕನು ವರಿ

ಸುವ ವರನಂತೆ. ತಂದೆಯಲ್ಲಿ ಪ್ರೀತಿ-ವಾತ್ಸಲ್ಯವಿರುವುದು; ವರನಲ್ಲಿ ಕಾಮ ಮೋಹ-ಪ್ರೇಮ-ಸೌಂದರ್ಯೋಪಾಸನೆ ಇರುವುದು. ಸೃಷ್ಟಿ ಮಾಡುವವನು ಕವಿಯು; ಸೃಷ್ಟಿಯಲ್ಲಿ ಕಾಂಬುದೇನು ಎಂಬುದನ್ನು ವಿವರಿಸುವವನು ವಿಮರ್ಶಕನು. ಉತ್ಪತ್ತಿಯ ದೃಷ್ಟಿ ಒಬ್ಬನದು; ಉಪಯೋಗದ ದೃಷ್ಟಿ ಇನ್ನೊಬ್ಬನದು. ವೈಯುಕ್ತಿಕವಾದ ಅನುಭವವನ್ನು ಸಾರ್ವತ್ರಿಕ-ಸಾರ್ವಕಾಲಿಕವಾಗಿ ಮಾಡುವವನು ಕವಿಯು ಸಾರ್ವತ್ರಿಕವಾದ ಅನುಭವದ ಅಳತೆಗೋಲಿನಿಂದ ಸನಾತನವೆಂದು ತಿಳಿದ ಪ್ರಮಾಣಗಳಿಂದ ವೈಯಕ್ತಿಕ ಕೃತಿಗಳನ್ನು ಅಳೆಯುವವನು ವಿಮರ್ಶಕನು. ಹೀಗೆ ಭಿನ್ನ ಗುಣ-ಕರ್ಮಗಳಿಂದ ಒಡಗೂಡಿದವರು ಇವರು ಆಗಿರುವುದರಿಂದ ಇವರಿಬ್ಬರಲ್ಲಿ ಯಾವಾಗಲೂ ಒಂದು ಬಗೆಯ ಸೆಣಸಾಟ. ಅದೇ ಸಾರ್ವಜನಿಕರಿಗೆ ರಸದೂಟ. ಕವಿಯು ತನ್ನ ಗುಣಗಳ ಮೂಲಕ ಮುಂದಾಳು; ನಾಯಕನಾಗುವನು. ಅವನ ನೋಟ ಮುನ್ನೋಟ ವಿಮರ್ಶಕನು ಹೊಸ ಪ್ರಯೋಗಗಳಲ್ಲಿ ಆಸಕ್ತಿ ಇಲ್ಲದವನು. ಇದ್ದ ಯಾವ ಪಡಿಯಚ್ಚಿಗೆ ಈ ಕೃತಿ ಹೊಂದುವುದು ಎಂದು ತಲೆಕೆಡಿಸಿಕೊಂಡು ಹೊಸದು ಎಂಬ ಕಾರಣದಿಂದ ಹೊಂದಲಾರದಾದಾಗ ಅದರ ವಿಶಿಷ್ಟತೆಯ ಕಡೆಗೆ ಲಕ್ಷ್ಯಹಃಕದೆ, ಅದರಲ್ಲಿಯ ದೋಷಗಳನ್ನೆತ್ತಿತೋರಿ ತನ್ನ ದೃಷ್ಟಿದೋಷವನ್ನು ಹೊರಗೆಡಹುವನು. ಸಂಪ್ರದಾಯ ಬದ್ಧವಾದ ಸಮಾಜಕ್ಕೆ ಅದೇ ಅಪ್ಯಾಯಮಾನವಾಗಿ ಕವಿಯು ಕ್ರಾಂತಿಕಾರನೆಂದು ಹೆಸರು ಪಡೆಯುವನು. ಆ ಹೆಸರು ಬಂದಾಗ ಸಮಾಜವು ಕವಿಯನ್ನು ಸರಿಯಾಗಿ—ತನಗೆ ತಿಳಿಯದೆಯೇ—ಗುರುತಿಸಿದೆ ಎಂದು ಹೇಳಬಹುದು. ಕವಿಯೂ ತನ್ನ ಜೀವನ ಕಾರ್ಯದಲ್ಲಿ ಪ್ರವೃತ್ತನಾಗಿರುವನೆಂದು ಹೇಳಬಹುದು.

---

# ೨

## ಪ್ರಾಚಾರ್ಯ

ವಿನಾಯಕನೆಂದು ಅಂಕಿತನಾಮ ಕಾವ್ಯನಾಮಗಳಿಂದ ಹೆಸರು ಪಡೆದ ವಿನಾಯಕ ಕೃಷ್ಣ ಗೋಕಾಕರು-ಕವಿಯು; ವಿದ್ವಾಂಸರು; ಪಂಡಿತರು; ಶಿಕ್ಷಕರು. ಈ ಬಗೆಯಾಗಿ ಬೆಳೆದ ವಿನಾಯಕರು ಕವಿತ್ವದ ಗುಣಧರ್ಮವಾದ ನಾಯಕತ್ವವನ್ನು ಪಡೆಯುತ್ತಲಿದ್ದಾರೆ. ಹೊಸ ಹೆಜ್ಜೆಗಳನ್ನು ಹಾಕಿ ಹೊಸ ದಾರಿಯನ್ನು ತೋರುತ್ತಲಿದ್ದಾರೆ.

ವಿನಾಯಕ ಕೃಷ್ಣ ಗೋಕಾಕರು ಇಂದು ಧಾರವಾಡದ ಕರ್ನಾಟಕ ಕಾಲೇಜಿನ ಪ್ರಾಚಾರ್ಯರಾಗಿದ್ದಾರೆ. ಇದೇ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿ ಕಲಿತು, ಫೆಲೋ ಆಗಿ ಕಾಲಾಂತರದಲ್ಲಿ ಅಲ್ಲಿಯ ಮುಖ್ಯಾಧ್ಯಾಪಕರಾಗಿದ್ದಾರೆ. ಈ ತರಹದ ಯೋಗವು ಬಹಳ ಜನರಿಗೆ ಲಭಿಸುವದಿಲ್ಲ ಇಲ್ಲಿಯ ಕಾಲೇಜಿನಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಎಂ ಎ. ದವರೆಗೆ ಮುಗಿಸಿ ಮುಂದೆ ಪುಣೆಯ ಫರ್ಗುಸನ್ ಕಾಲೇಜಿನಲ್ಲಿ ಇಂಗ್ಲಿಷ ಭಾಷೆಯ ಅಧ್ಯಾಪಕರೆಂದು ಕೆಲಸ ಮಾಡಿದರು. ಅಲ್ಲಿ ಗೋಕಾಕರಿಗೆ ತಮ್ಮ ಅಂತರಂಗಿಕ ಸತ್ವದ ದರ್ಶನ ಮೊದಲಾಯಿತು. ಇದ್ದೂರಲ್ಲಿ, ಗೊತ್ತುಬಲ್ಲವರಲ್ಲಿ, ಜಾಣನೆಂದು ಅನ್ನಿಸಿಕೊಳ್ಳುವುದು ಮಹತ್ವದ ವಿಷಯವಲ್ಲ. ಆತ್ಮೀಯ ಅಭಿಮಾನದ ಮೂಲಕ ನಮ್ಮವ ದೊಡ್ಡವ ಎಂದು ಹೇಳಿಕೊಳ್ಳುವ ವಾಡಿಕೆಯುಂಟು. ಆದರೆ ಪರಪ್ರಾಂತದಲ್ಲಿ ಪರಕೀಯ ವಾತಾವರಣದಲ್ಲಿ ಗುಣಕ್ಕಾಗಿ ಗೌರವ ಪಡೆದುದು ವಿಶೇಷವೆಂದು ಹೇಳಬೇಕು. ವ್ಯಕ್ತಿಗೆ ತನ್ನ ಯೋಗ್ಯತೆಯ ಅರಿವಾಗುವುದು ಇಂತಹ ಸಂದರ್ಭಗಳಿಂದಲೇ. ಒಳ್ಳೇ ಚಿಕಿತ್ಸಕ ಬುದ್ಧಿಯ ಮಹಾರಾಷ್ಟ್ರದ ಗಂಡುಮೆಟ್ಟಿನ ಸ್ಥಳವೆನ್ನಿಸಿದ ಪುಣೆಯಲ್ಲಿ ಗೋಕಾಕರು ಒಳ್ಳೆಯ ಶಿಕ್ಷಕರೆಂದು ಹೆಸರು ಗಳಿಸಿದರು. ಇವರು ಸಂಸ್ಥೆಗೆ ಒಳ್ಳೆಯ ಕಾರ್ಯಕರ್ತರೂ ಆಗುವರೆಂದು ಸಂಘಟನಾ ಚಾತುರ್ಯದಿಂದ ಸಂಸ್ಥೆಗಳನ್ನು ನಡೆಸುತ್ತ ಬಂದಿರುವ ಪುಣೆಯ ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿಯವರಿಗೆ ಬಲುಬೇಗ ಮನವರಿಕೆಯಾಯಿತು.

ವಿದ್ಯಾರ್ಥಿ ವೃಂದದಲ್ಲಿ, ಪುಣೆಯ ಸಾಮಾಜಿಕ ಜೀವನದಲ್ಲಿ ಒಳ್ಳೇ ಜನಪ್ರಿಯರಾಗಿ ಬೆಳೆಯುತ್ತಿದ್ದ ಗೋಕಾಕರನ್ನು ತಮ್ಮ ಸಂಸ್ಥೆಯ ಆಜೀವ ಕಾರ್ಯಕರ್ತರೆಂದು ಮಾಡಿಕೊಳ್ಳಬೇಕೆಂದೆಣ್ಣಿಸಿ, ಸೊಸಾಯಿಟಿಯವರು ಇವರನ್ನು ಇಂಗ್ಲಂಡಿಗೆ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಕಳಿಸುವ ಏರ್ಪಾಡು ಮಾಡಿದರು ತಮ್ಮ ಸಂಸ್ಥೆಯ ಕಾರ್ಯಕರ್ತರು ಹೆಚ್ಚಿನ ಶಿಕ್ಷಣ-ಅನುಭವ ಪಡೆದವರು ಇರಬೇಕೆಂಬ ಉದಾತ್ತವಿಚಾರದಿಂದ ಗೋಕಾಕರನ್ನು ಆಕ್ಸಫರ್ಡ ವಿಶ್ವವಿದ್ಯಾಲಯಕ್ಕೆ ಹೆಚ್ಚಿನ ಶಿಕ್ಷಣಕ್ಕಾಗಿ ಕಳಿಸಿದರು.

ಸ್ವದೇಶದಲ್ಲಿ ಶಿಕ್ಷಣ ಪಡೆವಾಗ ಮೊದಲನೆಯ ತರಗತಿಯಲ್ಲಿ ಉತ್ತೀರ್ಣರಾದ ಗೋಕಾಕರು ತಮ್ಮ ತರಗತಿಯು ಯಾವಾಗಲೂ ಮೊದಲನೆಯದೇ ಎಂದು ವಿದೇಶದಲ್ಲಿ ಕೂಡ ತೋರಿಸಿದರು. ಒಳಗಿನ ಸತ್ವವು ಉಚ್ಚಚೇತನಮಯವಾಗಿರುವಾಗ ವಾತಾವರಣ ಬದಲಾದುದು ಅದರ ಮೇಲೆ ವಿಪರೀತ ಪರಿಣಾಮ ಮಾಡದೆ ಎಲ್ಲವನ್ನೂ ಮೈಗೂಡಿಸಿಕೊಂಡು ತನ್ನ ಪ್ರಭಾವವನ್ನು ಸ್ವಭಾವ ಸಹಜವಾಗಿ ಬೀರುವುದು. ಆ ನೈಜವಾದ ಅಂತರಂಗದ ಸತ್ವದ ಮೂಲಕ ಗೋಕಾಕರು ಯಾರೂ ಅಭಿಮಾನ ಪಡಬಹುದಾದ ರೀತಿಯಲ್ಲಿ ಅಲ್ಲಿ ಆಕ್ಸಫರ್ಡದಲ್ಲಿಯ ವ್ಯಾಸಂಗವನ್ನು ಮುಗಿಸಿ ತೀರ ಹೆಚ್ಚು ಗುಣಗಳನ್ನು ಪಡೆದು ಮೇಲಿನ ತರಗತಿಯಲ್ಲಿ ಮೇಲಿನ ಸ್ಥಾನವನ್ನು ಪಡೆದು ಅಲ್ಲಿಯ ಬಿ. ಎ. ಪದವಿ ಪಡೆದರು. ಪರದೇಶಕ್ಕೆ ಹೋಗಿ ಪದವಿ ಪಡೆದುಕೊಂಡು ಬರುವುದರಲ್ಲಿ ವಿಶೇಷವಿಲ್ಲ. ಸಾಮಾನ್ಯನ ದೃಷ್ಟಿಯಿಂದ ಅದೂ ವಿಶೇಷವೆ. ಆದರೆ ಅಸಾಮಾನ್ಯವಾದ ವ್ಯಕ್ತಿತ್ವಕ್ಕೆ ಪಡೆದ ಪದವಿಯಿಂದ ಏನೂ ವಿಶೇಷ ಅನ್ನಿಸುವುದಿಲ್ಲ. ಪರದೇಶಗಳಲ್ಲಿಯೆ ವಾಸಮಾಡಿದವರೆಷ್ಟು ಜನ ಇಲ್ಲ? ಪರದೇಶಕ್ಕೆ ಹೋಗಿ ಬಂದರೂ ಮೊದಲಿದ್ದಂತೆಯೆ ಉಳಿದವರೆಷ್ಟು ಜನ ಇಲ್ಲ? ಒಂದು ಜೀವನದಲ್ಲಿ ದೇಶ ಪ್ರದೇಶ ಬದಲಾವಣೆಯಿಂದ ಯಾವ ವಿಕಾಸವಾಗದೆ ಉಳಿದ ಜನರು ಮೂಲಸತ್ವದಲ್ಲಿ ಕೊರತೆ ಇದ್ದವರು. ಒಂದೊಂದು ಹೆಜ್ಜೆ ಇಟ್ಟು ಅದು ಪ್ರಗತಿಮಾರ್ಗದ ಹೆಜ್ಜೆಯಾಗಿ ಪರಿಣಿಸುವ ಹಾಗೆ ಬಾಳನ್ನು ಬೆಳೆಯಿಸಿಕೊಂಡು ಬಂದಾಗ ವಿದೇಶ ಪ್ರಯಾಣವು ವಿಶೇಷ ಸಂಸ್ಕಾರವನ್ನು ತಂದುಕೊಡುವುದು.

ಭಾರತದಲ್ಲಿದ್ದಾಗ—ಇಂಗ್ಲಂಡಿಗೆ ಹೋಗುವ ಮೊದಲು—ಗೋಕಾಕರು ಒಳ್ಳೆಯ ಪ್ರತಿಭಾವಂತ ವಿದ್ಯಾರ್ಥಿ ಎಂದೂ ಸ್ಫೂರ್ತಿದಾನಿ ಪ್ರೊಫೆಸರ

ರೆಂದೂ ಪ್ರಸಿದ್ಧಿ ಪಡೆದಿದ್ದರು. ಆಕ್ಸಫರ್ಡದಲ್ಲಿಯೂ ಪ್ರತಿಭಾವಂತಿಕೆ ನೆಲೆ ನಿಂತಿತು. ಅಂತರಂಗದಲ್ಲಿ ಅಡಗಿದ್ದ ಸತ್ವವು ಸ್ವಭಾವವಾಗಿ ವ್ಯಕ್ತವಾಯಿತು. ಗೋಕಾಕರ ಇಂಗ್ಲಂಡದ ವಾಸ್ತವ್ಯ, ಆಕ್ಸಫರ್ಡ ಜೀವನ, ಅಲ್ಲಿ ಅವರು ಮಾಡಿದ ಕೆಲಸ, ಇವೆಲ್ಲ ಈಗಾಗಲೇ ದಿನಚರಿ-ಪತ್ರಗಳ ಮುಖಾಂತರ ವಿವರವಾಗಿ 'ಸಮುದ್ರದಾಚೆಯಿಂದ' ಎಂಬ ಎರಡು ವಿಭಾಗಗಳ ಪುಸ್ತಕದಲ್ಲಿ ಬಂದಿದೆ. ಆಕ್ಸಫರ್ಡದಲ್ಲಿ ಗೋಕಾಕರು ಉತ್ತಮ ತರಗತಿಯ ವಿದ್ಯಾರ್ಥಿ ಎಂದು ತಮ್ಮ ಪ್ರೊಫೆಸರರಾದ ರೆನ್ನರಿಂದ ಪ್ರಶಂಸೆ ಪಡೆವರು. ಒಳ್ಳೇ ಮಾತುಗಾರರೆಂದು 'ಮಜಲಿಸ'ದಲ್ಲಿ ಮನ್ನಣೆ ಪಡೆದರು. ಭಾರತೀಯ ವಿದ್ಯಾರ್ಥಿಗಳು ಸಾಮಾನ್ಯವಾಗಿ ತಮ್ಮ ಭಾರತೀಯ ಸಂಸ್ಕೃತಿಯ ಸ್ವಭಾವ ವನ್ನು ಮರೆತು ಸ್ವದೇಶದ ಗೌರವಕ್ಕೆ ಧಕ್ಕೆ ತರುವಂತಹ ರೀತಿಯಲ್ಲಿ ವರ್ತಿ ಸುತ್ತಿರುವ ಆ ಕಾಲದಲ್ಲಿ ಇವರು ಸ್ವಾಭಿಮಾನ-ಸ್ವದೇಶಾಭಿಮಾನಗಳನ್ನು ಪ್ರಕಟಿಸಿ, ಪರತಂತ್ರ ದೇಶದ ಪ್ರಜೆಯಾಗಿದ್ದರೂ ಸ್ವತಂತ್ರ ಪ್ರವೃತ್ತಿಯು ಸಜೀವವಾಗಿದೆ ಎಂಬ ಅಭಿಪ್ರಾಯ ಇವರ ಸಹವಾಸದಲ್ಲಿ ಬಂದ ಆಂಗ್ಲರಿಗೆ ಉಂಟಾಗುವಂತೆ ಉದಾತ್ತವಾದ ರೀತಿಯಲ್ಲಿ ಬಾಳಿದರು. ಮಾತು ಬರಿಯ ಶಬ್ದಾಡಂಬರವಾದರೆ ಅದು ಬರಿಯ ಗಾಳಿ-ಸಪ್ಪಳ. ಸಂಸ್ಕೃತಿ — ಸಂಪನ್ನ ಸತ್ವಪೂರಿತ ವ್ಯಕ್ತ ಅಭಿಪ್ರಾಯವಾದರೆ ಮಾತು ಅರ್ಥಗರ್ಭಿತ ಸಾಹಿತ್ಯ. ಪರಭಾಷೆಯ ಅಭ್ಯಾಸಕ್ಕಾಗಿ ಹೋಗಿದ್ದ ಇವರು ಆ ಭಾಷಾ ಪ್ರದೇಶದಲ್ಲಿಯ ಮಾತೃಭಾಷೆಯಾಗಿದ್ದವರು ಅಭಿಮಾನಪಡುವಂತೆ, ಅಚ್ಚರಿ ಪಡುವಂತೆ, ಆಸ್ಥೆಪಡುವಂತೆ, ಕಲಿತು, ಅದರ ಪ್ರಯೋಗವನ್ನು ಮಾಡಿ ಅಲ್ಲಿಯ ಜನ ಮೆಚ್ಚುವಂತೆ ಬಳಸಿ, ಬೆಳೆಯಿಸಿ, ಬೆಳೆದು ಬಂದ ಗೋಕಾಕರು ಪ್ರತಿಭಾವಂತರೆಂದು ಹೇಳಿದರೆ, ಅವರ ಸ್ವಭಾವವನ್ನು ಗುರುತಿಸಿದಂತೆ ಮಾತ್ರ; ಅದು ಉಪಚಾರದ ಮಾತು ಅಲ್ಲ; ಅಲಂಕಾರದ ಪ್ರಯೋಗ ಅಲ್ಲ. ಪ್ರತಿಭಾವಂತನಿಗೆ-ದೇಶ-ಕಾಲ-ಭಾಷೆಗಳು ಬಂಧನ ಹಾಕುವುದಿಲ್ಲ. ಪ್ರತಿಭಾ ವಂತನು ಮುಕ್ತಜೀವಿ. ಯಾವುದು ತನ್ನದೆಂದು ಅವನು ಹೇಳಿಕೊಳ್ಳುವ ಅದೆಲ್ಲವೂ ಅವನದು. ಅದೆಲ್ಲವೂ ಆಸ್ಥೆಯ ದ್ಯೋತಕವೆ ಹೊರತು ಆಸಕ್ತಿಯ ಲಕ್ಷಣವಲ್ಲ. ಆಸಕ್ತಿಯಲ್ಲಿ-ಮೋಹ-ಮಾಯೆ-ಸ್ವಾರ್ಥ ತುಂಬಿರುವುದು. ಆಸಕ್ತಿಯಿಂದ ಮುಕ್ತಿಯಿಲ್ಲ. ಮುಕ್ತಿ ಇಲ್ಲದ ಬಂಧನವಿರುವಾಗ ಪ್ರತಿಭೆಯು ಕುಗ್ಗುವುದು. ಕುಗ್ಗಿದ ಪ್ರತಿಭೆಯು ನವನವೋನ್ಮೇಷಶಾಲಿನಿಯಾಗ ಬಹುದೆ?

ಮುಕ್ತಿ ಎಂದಕೂಡಲೆ, ಪುರುಷಾರ್ಥದ ಕೊನೆಯ ಹಂತದ ಮೋಕ್ಷ ಎಂಬ ಅರ್ಥವ ಕಡೆಗೆ ನೋಡಬಾರದೆಂದು ಎಚ್ಚರಿಸಬೇಕಾಗುವುದು. ಈ ಮುಕ್ತಿ ಪೂರ್ವ ಗ್ರಹದೂಷಿತ ವಿಚಾರ-ಭಾವನೆಗಳಿಂದ ಮುಕ್ತಿ. ಈ ಮುಕ್ತಿ ಬಿಚ್ಚು ಮನಸ್ಸಿನ ವಾತಾವರಣ ನಿರ್ಮಿಸುವುದು. ಯಾವುದೊಂದು ವಿಷಯ ಕಣ್ಣು ಮುಂದೆ ಬಂದಾಗ ವಿಷಯವನ್ನು ತಿಳಿವ ಲವಲವಿಕೆಯು ಮುಖ್ಯ. ಅದು ಯಾರಿಂದ ಯಾವ ದೃಷ್ಟಿಯಿಂದ ಯಾಕೆ ಬಂದಿತು ಎಂಬ ಸಂಕುಚಿತ ಮನೋಭಾವ ಮೂಡಿದರೆ ಜಿಜ್ಞಾಸೆಗೆ ಬಂಧನವುಂಟಾಗುವುದು. ಈ ಮುಕ್ತಿಯು ಪ್ರತಿಭಾವಂತನಿಗೆ ಇರುವ release from prejudices. Release is the 1st Step of realisation. ಮುಕ್ತಿಯಿಂದ ಸಿದ್ಧಿ. ಮುಕ್ತಿ ಸಿದ್ಧಿಗೆ ಸೋಪಾನ. ಸಾಧನದಿಂದ ಸಿದ್ಧಿ. ಸಿದ್ಧಿಯಿಂದ ಮೋಕ್ಷ ಈ ದಾರಿ ಬೇರೆ. ಅದು ಆತ್ಮಿಕ ಅಭಿವೃದ್ಧಿಯ ದಾರಿ. ಅದು ಅನುಭಾವಿಯ ದಾರಿ. ಅನುಭವಜನ್ಯವಾದ ಸಿದ್ಧಿಗೆ ಮುಕ್ತಿಯೆ ಸೋಪಾನ ಎಂಬುದು ವಿದ್ಯಾವಿನಯ ಸಂಪನ್ನತೆಯ ದಾರಿ. ಈ ಎರಡೂ ದಾರಿಗಳು ಕ್ರಮೇಣ ಒಂದುಗೂಡಿ ಜೀವನದಲ್ಲಿಯ ವ್ಯಾವಹಾರಿಕ ಹಾಗೂ ಆಧ್ಯಾತ್ಮಿಕ ಧ್ಯೇಯಗಳ ಸಾಮರಸ್ಯದಲ್ಲಿ ಪರಿಣಮಿಸುವುದು. ಆಗ ವಿದ್ವಾಂಸನು, ಪಂಡಿತನು, ಕವಿಯಾಗುವನು; ಋಷಿಯಾಗುವನು. ದೃಷ್ಟಾರನಾಗುವನು.

ವ್ಯಾವಹಾರಿಕ ಜೀವನದಲ್ಲಿ ಇಂದು ಗೋಕಾಕರು ಒಂದು ಶಿಕ್ಷಣ ಸಂಸ್ಥೆಯ ಪ್ರಾಚಾರ್ಯರು. ಆಧ್ಯಾತ್ಮಿಕ ಜೀವನದಲ್ಲಿ ಸಾಧಕರು. ಸಾಹಿತ್ಯ ಪ್ರಪಂಚವಲ್ಲಿ ಕವಿಗಳು. ಈ ಮೂರು ಮಾರ್ಗಗಳಲ್ಲಿ ನಡೆದು ಮೂರೂ ದಾರಿಗಳನ್ನು ಒಂದು ದಾರಿಯಲ್ಲಿ ಕೂಡಿಸಿಕೊಂಡು ಮಾರ್ಗದರ್ಶನ ಮಾಡುತ್ತಿರುವ ಶಿಕ್ಷಕರು. ಈ ಬಗೆಯಾದ ಜೀವನವನ್ನು ನಡೆಯಿಸುವಂತೆ ಅನುಕೂಲವಾಗಲು ಅವರ ಜೀವನದಲ್ಲಿ ಒದಗಿ ಬಂದ ಸಂಗತಿಗಳೇ ಕಾರಣವಾಗಿವೆ. ಸಂಗತಿ – ಸತ್‌ಸಂಗ – ಸ್ವಾಧ್ಯಾಯ – ಸಾಧನ ಇವು ಪ್ರೇರಕ ಹಾಗೂ ಪೂರಕ ಸನ್ನಿವೇಶಗಳಾಗಿವೆ.

---

## ೩

## ಪರಂಪರೆ

ಸನ್ನಿವೇಶಗಳು ಜೀವನದಲ್ಲಿ ವಾತಾವರಣವನ್ನು ನಿರ್ಮಿಸುವುವು ಸತ್ವವು ಆನುವಂಶಿಕವಾಗಿ ಬಂದ ಬೀಜ ಸ್ವರೂಪವು. ಸತ್ವ ಸನ್ನಿವೇಶಗಳ ಸಂಘರ್ಷಣದಿಂದ ಜೀವನವು ಅರಳುವುದು; ಇಲ್ಲವೆ ಕಮರುವುದು. ಅರಳಿದ ಜೀವನದಲ್ಲಿ ಸತ್ವವು ಮೇಲುಗೈ ಪಡೆದಿದೆ ಎಂಬುದು ಸ್ಪಷ್ಟವಾಗುವುದು; ವಾತಾವರಣವು ಪ್ರಭಾವಿಯಾಗದೆ ಪೋಷಕವಾಗಿದೆ, ಪ್ರೇರಕವಾಗಿದೆ ಎಂದು ಅರ್ಥವಾಗುವುದು ಜೀವನವು ಕಮರಿದ್ದರೆ, ವಾತಾವರಣವು ಪ್ರಭಾವಿಯಾಗಿ ಪರಿಣಮಿಸಿ ಸತ್ವವನ್ನು ಚೇತನರಹಿತವಾಗಿ ಮಾಡಿದೆ, ಎಂದು ಹೇಳಬೇಕಾಗುವುದು. ವಿಕಸಿತವಾದ ಜೀವನವು ಅಡ್ಡಿ-ಆತಂಕುಗಳುಳ್ಳ ವಾತಾವರಣವನ್ನು ತನ್ನ ಬೆಳಿಗೆಗೆ ಅನುಕೂಲಮಾಡಿಕೊಂಡಿರುವುದು.

ವಿನಾಯಕ ಕೃಷ್ಣ ಗೋಕಾಕರು ೧೯೦೯ ನೆಯ ಇಸ್ವಿಯ ಅಗಸ್ಟ ೯ ನೆಯ ತಾರೀಖಿಗೆ ಸವಣೂರಲ್ಲಿ ಹುಟ್ಟಿದರು. ಸವಣೂರು ವಿನಾಯಕರ ಜೀವನದಲ್ಲಿ ಬಹು ಮಹತ್ವ ಪಡೆದ ಊರಾಗಿದೆ; ಮಾರ್ಪಾಡಾಗುವ ವಯಸ್ಸಿನಲ್ಲಿ ತುಂಬಾ ಪ್ರಭಾವ ಬೀರಿದೆ. ಸವಣೂರು ತಾಯಿಯ ತವರಮನೆಯ ಊರು. ತಾಯಿಯ ತಂದೆ-ತಾಯಿ ಇವರು ವಿನಾಯಕರ ಜೀವನ ಮಾರ್ಪಾಟಿಗೆ ಕಾರಣರಾಗಿದ್ದಾರೆ.

ವಿನಾಯಕರ ತಂದೆ ಕೃಷ್ಣರಾಯರು ಲಕ್ಷ್ಮೇಶ್ವರದ ವೈಷ್ಣವ ಮನೆತನದವರು ಕೃಷ್ಣರಾಯರನ್ನು ಸೋದರಮಾವ ದತ್ತಕ ತೆಗೆದುಕೊಂಡರು. ಸೋದರಮಾವನ ಮನೆತನ ಸ್ಮಾರ್ತಸಂಪ್ರದಾಯದ ಮನೆತನ. ಕೃಷ್ಣರಾಯರು ಸ್ಮಾರ್ತ ಮತ್ತು ವೈಷ್ಣವ ಸಂಪ್ರದಾಯಗಳ ಸಂಮಿಶ್ರ ಪ್ರಭಾವದಲ್ಲಿ ಬೆಳೆದರು. ಕೃಷ್ಣರಾಯರು ದತ್ತಕ ಹೋದವರಾದ್ದರಿಂದ ಮೂಲಮನೆತನದಲ್ಲಿ ಸ್ಥಾನವಿಲ್ಲದಾಯಿತು. ಅವಕ್ಕಾಗಿ ಮನೆಯಲ್ಲಿ ಜಗಳ ಉಂಟಾಗಿ ಕೃಷ್ಣರಾಯರಿಗೆ ತೀರ ಚಿಕ್ಕತನದಲ್ಲಿಯೆ ಸಂಸಾರದ ಹೊಣೆ ಹೊರುವಂತೆ

ಆಯಿತು. ಮನೆತನದಲ್ಲಿ ಉಂಟಾದ ವಿರಸದ ವಾತಾವರಣವು ವಿನಾಯಕರ ಮೇಲೆ ಅವ್ಯಕ್ತವಾಗಿಯೆ ಪರಿಣಾಮ ಮಾಡುತ್ತಿತ್ತು. ಆಸ್ತಿಯ ಮೂಲಕ ಉಂಟಾದ ಜಗಳವು ಕೃಷ್ಣರಾಯರನ್ನು ತಳಮಳಿಸಿತು. ಅಂತಃಕರಣವನ್ನು ಅಲ್ಲಗಳೆಯುವ ಶಕ್ತಿ ಆಸ್ತಿಗೆ ಇದೆಯಲ್ಲ! ಮನುಷ್ಯನಿಗಾಗಿ ಆಸ್ತಿಯೋ ಆಸ್ತಿಗಾಗಿ ಮನುಷ್ಯನೋ ? ಆಸ್ತಿಯು ಮಾನವನ ಅಸ್ತಿತ್ವವನ್ನೇ ಹಾಳು ಮಾಡುವುದಲ್ಲ ! ಈ ಸಂದರ್ಭಕ್ಕಾಗಿ ಜೀವನಕ್ಕೆ ಹೇಸಿಕೊಂಡು ಕೃಷ್ಣ ರಾಯರು ಆತ್ಮಹತ್ಯಮಾಡಿಕೊಳ್ಳಬೇಕೆಂದೂ ಪ್ರಯತ್ನ ಮಾಡಿದರು. ಈ ಮನೋವೃತ್ತಿಯನ್ನು ತಡೆದು ಕೃಷ್ಣರಾಯರಿಗೆ ಧೈರ್ಯ ತಂದು ಕೊಟ್ಟ ವರು ಶ್ರೀ. ಅಭ್ಯಂಕರ ಎಂಬ ಮಹನೀಯರು. ಶ್ರೀ. ಅಭ್ಯಂಕರ ಇವರು ಪ್ರಪಂಚದ ರೀತಿ-ನೀತಿಗಳನ್ನು ತಿಳಿದವರು. ಜೀವನದಲ್ಲಿಯ ಕಹಿ ಸಿಹಿಗಳನ್ನು ಸವಿದವರು. ತಾತ್ವಿಕವಾಗಿ ಜೀವನದ ಮರ್ಮವನ್ನು ತಿಳಿಯದೆ ಸುಖ ಬಾಳುವೆಯು ಸಾಧ್ಯವಿಲ್ಲೆಂದು ಶ್ರೀ. ಅಭ್ಯಂಕರರು ಕೃಷ್ಣರಾಯರಿಗೆ ಮನ ವರಿಕೆ ಮಾಡಿಕೊಟ್ಟರು. ಶ್ರೀ. ಅಭ್ಯಂಕರರು ಕೃಷ್ಣರಾಯರಿಗೆ ಬಾಳೆ ಕುಂದ್ರಿಯ ಪಂತಮಹಾರಾಜರ ಸಾನ್ನಿಧ್ಯವನ್ನು ತೋರಿದರು. ಪಂತಮಹಾ ರಾಜರ ಅನುಗ್ರಹದಿಂದ ಕೃಷ್ಣರಾಯರ ಜೀವನವೇ ಬದಲಾಯಿತು. ಜ್ಯೋತಿಷ ಶಾಸ್ತ್ರದ ಅಭ್ಯಾಸ ಮಾಡಬೇಕೆಂದು ಹನ್ನೆರಡು ವರುಷಗಳವರೆಗೆ ಊರು ಊರು ಅಲೆದು ಅಭ್ಯಾಸ ಮಾಡಿದರು. ಕೃಷ್ಣರಾಯರು ಹೀಗೆ ಸಂಚಾರಿ ಯಾಗಿ ಜೀವನ ನಡೆಸಿದುದರಿಂದ ಊರಲ್ಲಿರುವುದು ಕಡಿಮೆಯಾಯಿತು. ವಿನಾಯಕರು ತಾಯಿಯ ಜತೆಗೆ ಅಜ್ಜ-ಅಜ್ಜಿಯರ ಹತ್ತರ ಸವಣೂರಲ್ಲಿ ಇರ ತೊಡಗಿದರು. ಪಂತಮಹಾರಾಜರ ಪ್ರಭಾವವು ತಂದೆ ಕೃಷ್ಣರಾಯರ ಮೇಲೆ ಆದುದು ಮನೆಯ ವಾತಾವರಣವನ್ನು ಬದಲಿಸಿದ್ದದರಿಂದ ವಿನಾಯಕರ ಮೇಲೆಯೂ ಸಾಧು ಜೀವನದ ಪರಿಣಾಮವಾಯಿತು. ಆತ್ಮಿಕ ಜೀವನದ ಚಿಗುರು ಒಡೆದುದು ಇದೇ ಸಮಯದಲ್ಲಿಯೆ. ತನ್ನ ಮನದಲ್ಲಿ ಏನಾಗುತ್ತಿದೆ ಯೆಂಬುದು ವಿನಾಯಕರಿಗೆ ಸ್ಪಷ್ಟವಾಗಿ ತಿಳಿಯದು. ಬಾಲ್ಯದ ನಿರ್ಲಿಪ್ತ ತನವೂ ಇರಲಿಲ್ಲ. ಏನೋ ಒಂದು ಅವ್ಯಕ್ತ, ಅಸ್ಪಷ್ಟ, ಅಸಾಧಾರಣ, ಆಕ ರ್ಷಕ ಮನೋಭಾವವು ಮೂಡತೊಡಗಿತು. ಕಳೆದುಕೊಂಡು ಹುಡುಕುವ ಭಾವ ಬೆಳೆಯತೊಡಗಿತು. ಅಸಮಾಧಾನ—ಅತೃಪ್ತಿ—ಇದು ಯಾವುದಕ್ಕಾಗಿ

ಎಂಬುದು ಅಸ್ಪಷ್ಟ. ಇದರ ಮೂಲಕ ಬಾಲಕ ವಿನಾಯಕನ ಮನಃಪ್ರವೃತ್ತಿಯನ್ನು ತಿಳಿಯುವುದು ಮನೆಯಲ್ಲಿಯೂ ಶಾಲೆಯಲ್ಲಿಯೂ ಕಠಿಣವಾಯಿತು.

ಒಂದು ಬಗೆಯ 'ಹುಚ್ಚು' ಹಿಡಿದ ಹಾಗೆ ಮಾಡುತ್ತಿದ್ದ ವಿನಾಯಕರಿಗೆ ಇನ್ನೊಂದು ಆಘಾತವಾಯಿತು. ಚಿಕ್ಕತನದಲ್ಲಿ ವಿನಾಯಕರ ಒಬ್ಬ ತಮ್ಮ, ಒಬ್ಬ ತಂಗಿ ಮರಣಹೊಂದಿದರು. ಮರಣವು ಆ ಬಾಲ ಮನಸ್ಸಿಗೆ ತಿಳಿಯದ ಘಟನೆಯಾಯಿತು. ಮರಣವು ಒಂದು ಗೂಢ ಸಮಸ್ಯೆಯಾಯಿತು. ವಿಚಾರ ಮಾಡಿದ ಹಾಗೆಲ್ಲ, ಅದರ ಇಂಗಿತವು ತಿಳಿಯದೆ, ವಿನಾಯಕರನ್ನು ನಿರ್ವಿಣ್ಣ್ಯಮಾಡುತ್ತಿತ್ತು; ಮರಣದ ಬಗ್ಗೆ ಉಂಟಾದ ಕುತೂಹಲವು ವಿನಾಯಕರನ್ನು ಅಂತರ್ಮುಖಿಯಾಗಿ ಮಾಡಿತು. ಯಾವ ಗುಣಿತ ಹಾಕಿದದರೂ ಏನೂ ತಿಳಿಯದಾಯಿತು ಅಜ್ಞಾನವು ಅಸಹಾಯ ಸ್ಥಿತಿಯನ್ನು ತಂದು ಜ್ಞಾನದ ಹಸಿವನ್ನು ಹೆಚ್ಚಿಸತೊಡಗಿತು. ಹಸಿವು ಆದುದರ ಅರಿವು ಮೂಡಿದರೂ ಯಾವ ಜ್ಞಾನದ ಹಸಿವು ಎಂಬುದು ಅಸ್ಪಷ್ಟವಾಗಿದ್ದಿತು. ಜೀವನ-ಮರಣಗಳು ಸಮಸ್ಯೆಯ ರೂಪು ತಳೆದಿದ್ದವು. ಅವುಗಳ ಅರ್ಥವನ್ನು ಹೇಳುವವರು ಯಾರು? ಮೊಗದ ಮೇಲೆ ಪ್ರಶ್ನಾರ್ಥಕ ಚಿಹ್ನ ಕಂಡು ಬರದಿದ್ದರೂ ಹೃದಯದ ಮೇಲೆ ಬರೆ ಎಳೆದಂತಾಯಿತು; ಅದು ವಿಚಾರ ಶಕ್ತಿಯನ್ನು ಪ್ರಚೋದಿಸುವಂತಾಯಿತು. ಆಗಿನ ವಿಚಾರಗಳೆಲ್ಲ ಪ್ರಶ್ನೆಗಳ ಮಾಲಿಕೆಗಳು ಆದುವೇ ಹೊರತು ಒಂದಕ್ಕೂ ಉತ್ತರಹೊಳೆಯಲಿಲ್ಲ.

ವಿನಾಯಕರ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವು ಸವಣೂರಲ್ಲಿ ಅಜ್ಜನ ಕಣ್ಣರಿಕೆಯಲ್ಲಿಯೆ ಆದುವು. ಅಜ್ಜನು ಆಗಿನ ಕಾಲದ ಹೆಸರಾದ ಇಂಗ್ಲಿಷ ಶಿಕ್ಷಕರು. ಅವರಿಗೆ ಬ್ಯಾಡಿಗಿ ಮಾಸ್ತರ ಎಂದು ಕರೆಯುತ್ತಿದ್ದರು. ಇವರು ಶಾಲೆಯಲ್ಲಿ ಕಲಿಸುವದಲ್ಲದೆ ಮನೆಯಲ್ಲಿಯೂ ಹುಡುಗರಿಗೆ ಪಾಠ ಹೇಳುತ್ತಿದ್ದರು. ಇಂಗ್ಲಿಷ ಶಾಲೆಗೆ ಸೇರುವ ಮೊದಲೆ ವಿನಾಯಕರಿಗೆ ಇಂಗ್ಲಿಷ ಭಾಷೆಯ ಸಂಸ್ಕಾರ ಆಗಿದ್ದಿತು. ಶಬ್ದಗಳ ಅರ್ಥ ತಿಳಿಯದೆಯೆ ಅವುಗಳನ್ನು ಉಚ್ಚಾರ ಮಾಡುವುದು ವಿನಾಯಕರ ಚಟವಾಗಿದ್ದಿತು. ಅಜ್ಜನು ತಾನು ಉಳಿದ ಹುಡುಗರಿಗೆ ಪಾಠ ಹೇಳುತ್ತಿದ್ದರೂ ಮೊಮ್ಮಗನಿಗೆ ಅದರ ಲಾಭವಾಗಹತ್ತಿದೆಯೆಂದು ತಿಳಿದಿರಲಿಲ್ಲ. ಅಜ್ಜನ ಇಂಗ್ಲಿಷ ಉಚ್ಚಾರವು ವಿನಾಯಕರ ನಾಲಗೆಯ ಚಾಪಲ್ಯವನ್ನು ತೀರಿಸುತ್ತಿತ್ತು. ಇಂಗ್ಲಿಷ ಭಾಷೆ

ಒಳ್ಳೆಯದು; ಅವನ್ನು ಕಲಿಯಬೇಕು; ಅಜ್ಜನ ಹಾಗೆ ಉಚ್ಚಾರ ಮಾಡಬೇಕು ಎಂಬ ಲವಲವಿಕೆ ವಿನಾಯಕರಲ್ಲಿ ಮೂಡಿತು.

ಹೋಳಿಹುಣ್ಣಿಮೆಯ ಸಮಯದಲ್ಲಿ ಒಮ್ಮೆ ವಿನಾಯಕರು ತಮಗೆ ಒಂದು ಬಾರಿಸುವ ಹಲಿಗೆ ಬೇಕೆಂದು ಹಟ ಹಿಡಿದಿದ್ದರು. ಅಜ್ಜನು ಅದೇ ಹಣದಲ್ಲಿ ಒಂದು ಇಂಗ್ಲಿಷ ಕತೆ ಪುಸ್ತಕವನ್ನು ಕೊಡಿಸಿ ಬಾಲಕನ ಮನಸ್ಸನ್ನು ಆಂಗ್ಲ ಸಾಹಿತ್ಯದ ಕಡೆಗೆ ತಿರುಗಿಸಿದರು. ಆ ಒಲವು ನೆಲೆ ನಿಲ್ಲುವಂತಹ ಒಲವಾಯಿತು. ಮಾಧ್ಯಮಿಕ ಶಾಲೆಯಲ್ಲಿರುವಾಗಲೇ ವಿನಾಯಕರಿಗೆ ಕಾವ್ಯಸ್ಫೂರ್ತಿಯು ಅರಿವಾಯಿತು. ವಿನಾಯಕರು ೧೩-೧೪ ವರುಷದ ವಯಸ್ಸಿಗೆ ಬಂದಾಗ 'ಪ್ಲೇಟೋನಿಕ್' ಮಾದರಿಯ ಸ್ವಗತ ಪ್ರೇಮವು ಅವರ ಆಂತರಿಕ ಜೀವನಕ್ಕೆ ಒಂದು ಆಳವನ್ನು ತಂದು ಕೊಟ್ಟಿತು. ಈ ಸ್ವಗತ ಪ್ರೇಮದ ತಳಮಳವು ಹರೆಯದ ತಳಮಳವಲ್ಲ ತಿಳಿವ ತಳಮಳವಲ್ಲ. ಅಸ್ಪಷ್ಟ-ಆಕರ್ಷಕವಾದ ಭಾವನೆಗಳ ಉದ್ರೇಕದ-ಉದ್ವೇಗದ ತಳಮಳ. ಕಲ್ಪನಾವಿಲಾಸಕ್ಕೆ ಒಂದು ವ್ಯಾಪಕವಾದ ಕ್ಷೇತ್ರವನ್ನು ಒದಗಿಸಿದ ತಳಮಳ. ಇದು ಕಾವ್ಯಸ್ಫೂರ್ತಿಯಾಗಿ ಹೊರಬರಲೆತ್ನಿಸಿತು. ಆಗ ಇಂಗ್ಲಿಷ ಭಾಷೆಯೆ ಈ ಭಾವನೆಗಳ ಪ್ರಕಟನೆಯ ಮಾಧ್ಯಮವಾಯಿತು.

ಈ ಪ್ರಯತ್ನಕ್ಕೆ ಪುಟ ಕೊಟ್ಟವರು ಶಾಲೆಯಲ್ಲಿಯ ಶಿಕ್ಷಕರಾಗಿದ್ದ ಶ್ರೀ. ತಂತ್ರಿ ಎಂಬವರು. ವಿನಾಯಕರಲ್ಲಿ ಹುದುಗಿದ್ದ ಕವಿತ್ವ ಶಕ್ತಿಯನ್ನು ಈ ತಂತ್ರಿ ಮಾಸ್ತರರು ಗುರುತಿಸಿದರು. ಅವರು ವಿನಾಯಕರಿಗೆ ಉತ್ತೇಜನ ಕೊಟ್ಟರು. ಶ್ರೀ. ತಂತ್ರಿಯವರ ಉತ್ತೇಜನವು ಕಾವ್ಯರಚನೆಗೆ ಬಾಹ್ಯಸ್ಫೂರ್ತಿಯನ್ನು ಒದವಿಸಿದರೆ, ಪ್ಲೇಟೋನಿಕ್ ಪ್ರೇಮವು ಆಂತರಿಕ ಸ್ಫೂರ್ತಿಯನ್ನು ಒದವಿಸಿತು. ಆಗ ಕಲ್ಪನೆಯು ಸಹಚರಿಯಾದಳು; ನಿಸರ್ಗದೇವಿಯೇ ಅಭಯದಾನಿಯಾದಳು. ಏಕಾಂತ ಜೀವನದ ಆಸೆ ಕೊನರೊಡೆಯಿತು.

ಏಕಾಂತ ಜೀವನದ ಆಸೆಯು ಜನರಿಂದ-ಗೆಳೆಯರಿಂದ ದೂರ ಇರಿಸತೊಡಗಿತು. ನಿಸರ್ಗದ ಒಡನಾಟ ಹೆಚ್ಚಾಗತೊಡಗಿತು. ಇದರಿಂದ ಜೀವನ-ಮರಣ-ದೇವತ್ವ ಮುಂತಾದ ವಿಷಯಗಳು ಮನಃಪಟಲದ ಮೇಲೆ ಆಗಾಗ ಅಪ್ಪಳಿಸತೊಡಗಿದವು. ಕಣ್ಣಿಗೆ ಕಾಣುವ ಪ್ರತಿಯೊಂದು ಘಟನೆಯ ಅರ್ಥ ಮಾಡಿಕೊಳ್ಳಬೇಕೆನ್ನಿಸಿತು. ಮಾನವನ ಕಾರ್ಯವೇನು? ವಿಶ್ವವ್ಯವಸ್ಥೆಯಲ್ಲಿ

ಅವನ ಸ್ಥಾನವೇನು? ಮಾನವ ಪ್ರಯತ್ನದ ಭಾಗ ಎಷ್ಟು? ದೈವೀಕೃಪೆಯ ಭಾಗ ಎಷ್ಟು? ಎಲ್ಲವೂ ದೇವ ಸಂಚಾಲಿತವೆ? ಬೆಳಗು–ಸಂಜೆ, ಸೂರ್ಯ–ಚಂದ್ರ, ನಕ್ಷತ್ರ; ಗುಡ್ಡ, ನದಿ, ಗಿಡಮರ–ಸಸ್ಯ, ಇವೆಲ್ಲವೂ ಒಂದೊಂದು ಅರ್ಥ ಹೇಳತೊಡಗಿದವು. ತಾನು ತಿಳಿದ ಅರ್ಥವು ಸರಿಯೆ? ಮತ್ತೆ ಬೇರೆ ಯಾವುದಾದರೂ ಅರ್ಥವಿದೆಯೆ? ಇದ್ದರೆ ಅದನ್ನು ಹೇಳುವವರು ಯಾರು?

ಈ ಮನಸ್ಸಿನ ಅವಸ್ಥೆಯಲ್ಲಿ ಒಂದು ದಿನ ವಿನಾಯಕರು ಸವಣೂರ ಊರ ಹೊರಗಿನ ದುರ್ಗಾದೇವತೆಯ ಗುಡಿಗೆ ಹೋದರು. ಅಲ್ಲಿಯೊಬ್ಬ ಪೂಜಾರಿ ಅವನು ದೇವೀ ಭಕ್ತ. ಅವನ ಭಕ್ತಿ ಶ್ರದ್ಧೆಗಳಿಗೆ ಆಧಾರವಾದ ಘಟನೆಯೊಂದು ಅವನ ಜೀವನದಲ್ಲಿ ಸಂಭವಿಸಿತ್ತು. ಪೂಜಾರಿ ಮೊದಲು ಒಬ್ಬ ಕೂಲಿಕಾರ ದಿನಗೂಲಿ ಮಾಡಿ ಹೊಟ್ಟೆಹೊರೆದುಕೊಳ್ಳುತ್ತಿದ್ದ. ಒಮ್ಮೆ ಒಂದು ಭಾವಿ ಅಗೆಯುವ ಕೆಲಸಕ್ಕೆ ಹೋಗಿದ್ದ. ನಾಲ್ಕಾರು ಆಳು ಭಾವಿ ಅಗೆಯಲ್ಪಟ್ಟಿತ್ತು ನಾಲ್ಕೆಂಟು ಜನ ದುಡಿಯುತ್ತಿದ್ದರು. ಒಂದು ದಿನ ಇದ್ದಕ್ಕಿದ್ದಂತೆಯೆ ಭಾವಿಯ ಸುತ್ತಲಿನ ಮಣ್ಣು ಕುಸಿದು ಕೆಲಸ ಮಾಡುವವರ ಮೇಲೆ ಬಿದ್ದಿತು. ಈ ಪೂಜಾರಿ ಒಬ್ಬನ ಹೊರತು ಉಳಿದವರು ಅಲ್ಲಿ ಮರಣ ಹೊಂದಿದರು. ಬಿದ್ದಾಗಲೇ ದೇವಿಯ ದೃಷ್ಟಾಂತವಾಗಿ ಅವನು ಬದುಕಿದ ಉಳಿದವರು ಸತ್ತು ತಾನೊಬ್ಬನೆ ಬದುಕಿದನೇಕೆ? ಮುಂದಿನ ಜೀವನವೆಲ್ಲ ದೇವೀಸೇವೆಗೆ ಮುಡಿಪು ಎಂದು ಈ ದುರ್ಗಾದೇವಿಯ ಗುಡಿಯಲ್ಲಿ ಪೂಜಾರಿಯಾಗಿ ಬಂದು ನಿಂತನು. ಪೂಜಾರಿಗೆ ಓದು ಬರೆಹ ಬರುತ್ತಿದ್ದಿಲ್ಲ. ಆದರೆ ತಿಳಿದುಕೊಳ್ಳಬೇಕೆಂಬ ಹಂಬಲ. ಏಕಾಂತ ಜೀವಿಯಾಗಿ ಅಲೆಯುತ್ತಿದ್ದ ವಿನಾಯಕರಿಗೆ ದುರ್ಗಾದೇವತೆಯ ಗುಡಿಯು ಒಳ್ಳೆಯ ನಿವಾಂತ ಸ್ಥಾನವಾಗಿದ್ದಿತು. ಪೂಜಾರಿಯು ವಿನಾಯಕರಿಂದ ದೇವೀಪುರಾಣವನ್ನು ಓದಿಸಿ ಕೇಳುತ್ತಿದ್ದನು. ಈ ಪುರಾಣ ಓದುವುದರಲ್ಲಿ ವಿನಾಯಕರಿಗೆ ಆಸ್ಥೆ–ಆಸಕ್ತಿ ಹೆಚ್ಚಿದುವು. ಅತೃಪ್ತ—ಅಸಮಾಧಾನದ ಭಾವ ಜೀವನದಲ್ಲಿ ಏನೋ ಒಂದು ಬಗೆಯ ನೆಮ್ಮದಿಯುಂಟಾಗತೊಡಗಿತು. ಆತ್ಮಿಕ ವಿಚಾರಗಳು ತಾತ್ವಿಕ ವಿಚಾರಗಳು ಮೂಡತೊಡಗಿದವು. ಈ ಗುಡಿಯೆಂದರೆ ವಿನಾಯಕರ ಆಧ್ಯಾತ್ಮಿಕ ತವರಾಯಿತು. ಶ್ರದ್ಧೆಯೆ ಸರ್ವಸ್ವವಾಗಿರುವ ಜೀವನ ಸಮಯದಲ್ಲಿ ಈ ಗುಡಿಯ ವಾತಾವರಣವು ತಾರಕಶಕ್ತಿ

ಯನ್ನು ಓದವಿಸಿ ಮನಸ್ಸಿಗೆ ಉತ್ಸಾಹವನ್ನು ನೆಮ್ಮದಿಯನ್ನು ಕೊಡತೊಡಗಿತು ವಯಸ್ಸು ವಿಚಾರ ಬೆಳೆದವರೂ ದೇವಿಯ ಗುಡಿಯ ಆಕರ್ಷಣೆ ಎಂದೂ ಕಡಿಮೆಯಾಗಲಿಲ್ಲ; ಬೆಳೆಯುತ್ತಲೆ ನಡೆಯಿತು. ಈ ರೀತಿ ಹದಗೊಂಡ ಮನಸ್ಸಿಗೆ ಮನೆಯಲ್ಲಿನ ಪಂತಮಹಾರಾಜರ ಪದ್ಧತಿಯ ಭಜನೆ–ಆರತಿ, ಇವು ಬಲ ಕೊಟ್ಟವು. ದೈವೀಶಕ್ತಿಯ ಬಗ್ಗೆ ಆದರ ಭಕ್ತಿಗಳು ಧೃಡವಾಗತೊಡಗಿದುವು. ಎಳೆಯತನದಲ್ಲಿ ಚಿಗುರೊಡೆದ ಆಧ್ಯಾತ್ಮಿಕ ಭಾವಜೀವನಕ್ಕೆ ಪಂತಮಹಾರಾಜರಲ್ಲಿಯ ಭಕ್ತಿ ಆದರಗಳು ನೀರೆರೆದವು. ಈ ಅಂತರಂಗ ಜೀವನವು ವಿಕಾಸವಾದ ಹಾಗೆಲ್ಲ, ಪ್ರಕಟನಾ ಸಾಮರ್ಥ್ಯ ಹೆಚ್ಚತೊಡಗಿತು. ತಮಗೆ ಕಾವ್ಯಸ್ಫೂರ್ತಿ ಬರುವುದು ದೈವೀಪ್ರಸಾದವೆಂದು ಭಾವನೆಯಾಗತೊಡಗಿತು. ಅನುಭವಜನ್ಯವಾದ ಆಧ್ಯಾತ್ಮಿಕ ವಿಚಾರಗಳು ಕವನಗಳಲ್ಲಿ ಮೂಡತೊಡಗಿದುವು ವಿಚಾರಗಳು, ಭಾವನೆಗಳು ಪ್ರಕಟವಾದ ಹಾಗೆಲ್ಲ ತಾವು ತಿಳಿದುಕೊಂಡುದು ಇನ್ನೂ ಕಡಿಮೆಯಿದೆ, ಹೆಚ್ಚಿನ ಜ್ಞಾನ ಮಾಡಿಕೊಳ್ಳಬೇಕೆಂಬ ಲವಲವಿಕೆಯು ಹುಟ್ಟಿಕೊಂಡಿತು.

ಉಚ್ಚಶಿಕ್ಷಣಕ್ಕೆಂದು ವಿನಾಯಕರು ಧಾರವಾಡ ಕರ್ನಾಟಕ ಕಾಲೇಜಕ್ಕೆ ಬಂದರು. ಈ ಊರಿಗೆ ತೀರ ಹೊಸಬರು ಆದ್ದರಿಂದ ಲಕ್ಷ್ಮೇಶ್ವರದ ಶ್ರೀ. ಅಭ್ಯಂಕರ ಅವರಲ್ಲಿ ಇರುತ್ತಿದ್ದರು. ಅಲ್ಲಿ ಇರುತ್ತಿರುವಾಗ ವಿನಾಯಕರಿಗೆ ಕವಿ ಬೇಂದ್ರೆ ದತ್ತರಾಯರ ಪರಿಚಯವಾಯಿತು. ಅಭ್ಯಂಕರ ರಾಮರಾಯರು ವಿನಾಯಕರ ಸಹಪಾಠಿಗಳು ಅವರು ಬೇಂದ್ರೆಯವರ ವಿದ್ಯಾರ್ಥಿಗಳಾಗಿದ್ದದರಿಂದ ಆ ಮೂಲಕ ಬೇಂದ್ರೆಯವರ ಪರಿಚಯವಾಯಿತು. ಬೇಂದ್ರೆಯವರು ಮಾತಿಗೆ ತೊಡಗಿದರೆ ಅದಕ್ಕೆ ಮುಗಿಯೆಂಬುದೇ ಇರುತ್ತಿರಲಿಲ್ಲ. ವಿನಾಯಕರಿಗೆ ಬೇಂದ್ರೆಯವರ ಮಾತು–ಕತೆ ಹಿಡಿಸಿತು. ಬಹುಕಾಲದಿಂದ ಬಯಸುತ್ತಿದ್ದ ಸಹವಾಸವು ದೊರೆಯಿತೆಂಬ ಆನಂದವುಂಟಾಯಿತು. ಕವಿ ಬೇಂದ್ರೆಯವರ ಪರಿಚಯವು ಕವಿ ವಿನಾಯಕರಿಗೆ ಆಗಿ ಬೇಂದ್ರೆಯವರು ಹಿರಿಯರಾಗಿ ಸಲಹೆ ಸೂಚನೆಗಳನ್ನು ಕೊಡತೊಡಗಿದರು. ಚಿಕ್ಕಂದಿನಿಂದಲೂ ಶೆಲ್ಲಿ ಕವಿಯ ಕವನಗಳನ್ನು ವಿನಾಯಕರು ಓದುತ್ತಿದ್ದರೂ ಆ ಕವನಗಳಲ್ಲಿ ಹುದುಗಿದ ಒಳ ಅರ್ಥವು ಸಂಪೂರ್ಣವಾಗಿ ಮನೋಗತವಾಗಿದ್ದಿಲ್ಲ. ಬೇಂದ್ರೆಯವರ ಸಹವಾಸದಿಂದ ಶೆಲ್ಲಿಯ ಕವನಗಳು ಹೆಚ್ಚು ತಿಳಿಯಾಗಿ ತಿಳಿಯ

ತೊಡಗಿದುವು. ವಿನಾಯಕರ ಜೀವನದಲ್ಲಿ ಇದು ಎರಡನೆಯ ಘಟ್ಟವಾಯಿತು. ಬೇಂದ್ರೆಯವರ ಸಹವಾಸದಿಂದ ವಿನಾಯಕರಲ್ಲಿ ಕವಿತ್ವ ಶಕ್ತಿಯು ವಿಕಾಸವಾಗತೊಡಗಿತು. ಇದುವರೆಗೆ ಇಂಗ್ಲಿಶವೇ ವಿನಾಯಕರ ಪ್ರಕಟನಾ ಮಾಧ್ಯಮವಾಗಿದ್ದಿತು. ಬೇಂದ್ರೆಯವರ ಸಹವಾಸದ ಫಲವಾಗಿ ವಿನಾಯಕರು ಕನ್ನಡದಲ್ಲಿ ಬರೆಯತೊಡಗಿದರು. ಇಂಗ್ಲಿಶದಲ್ಲಿ ಓದಿ ಜ್ಞಾನ ಸಂಪಾದಿಸುವುದು; ಜ್ಞಾನದ ಅನುಭವ ಪಡೆವುದು; ಅನುಭವದ ರಸಪಾಕವನ್ನು ಕನ್ನಡದ ಮಾಧ್ಯಮದಿಂದ ಪ್ರಕಟಮಾಡುವುದು ಈ ಮುಂದಿನ ಜೀವನದ ದಾರಿಯಾಯಿತು. ಅಂತರಂಗದ ಜೀವನಕ್ಕೆ ಒಂದು ಮೊನೆದೊರೆಯಿತು. ಸಹವಾಸ–ಸಹಯೋಗದಿಂದ ಹೊಸ ಬೆಳಕು ಕಾಣತೊಡಗಿತು.

ವ್ಯಕ್ತಿಯ ಬಹಿರಂಗ ಜೀವನದ ವಿಕಾಸವು ವ್ಯಕ್ತಿತ್ವದ ಬೆಳಗೆಯ ಮೇಲೆ ಅವಲಂಬಿಸಿರುವುದು. ಹೊರನೋಟದಿಂದ ಸಮಾಧಾನ ಹೊಂದುವವರಿಗೆ ಒಳನೋಟದ ಅಗತ್ಯವೆ ಇರುವುದಿಲ್ಲ. ಒಳನೋಟದಿಂದ ವ್ಯಕ್ತಿಯನ್ನು ತಿಳಿಯ ಬಯಸುವವರು ವ್ಯಕ್ತಿತ್ವವನ್ನೇ ತಿಳಿಯಬೇಕು. ವ್ಯಕ್ತಿಯಿಲ್ಲದೆ ವ್ಯಕ್ತಿತ್ವವು ಪ್ರತ್ಯೇಕವಾಗಿರದೆ ಇರುವುದರಿಂದ ಅವು ಹಾಸು ಹೊಕ್ಕಾಗಿರುವುವು, ಎಂಬ ಅರಿವು ಬರುವುದು. ಬಿಡಿಸಿ ನೋಡದೆ ವ್ಯಕ್ತಿಯ ಚಿತ್ರವೂ ಕಾಣದು; ವ್ಯಕ್ತಿತ್ವದ ವ್ಯಾಪ್ತಿಯೂ ತಿಳಿಯದು. ಹೊರವಲಯವೇ ವ್ಯಕ್ತಿಯಾಗಿರುವುದರಿಂದ ವ್ಯಕ್ತಿ ವಿಚಾರವು ಆನುಷಂಗಿಕ; ಮುಖ್ಯವಾದದ್ದು ವ್ಯಕ್ತಿತ್ವ. ವ್ಯಕ್ತಿಗೆ ವ್ಯಕ್ತಿತ್ವ ಬರುವುದು ಚಾರಿತ್ರ್ಯ ಶಕ್ತಿಯಿಂದ. ಚಾರಿತ್ರ್ಯ ಶಕ್ತಿಯು ಯೋಗ ಮತ್ತು ತಪಸ್ಸಿನ ಫಲವಾಗಿದೆ. ಎದುರು ಬಂದ ತೊಡಕುಗಳ ಅರ್ಥ ಮಾಡಿಕೊಂಡು ಸಂಕಟ ಬಂದರೂ ಸರಿಯಾದುದನ್ನೇ ಮಾಡುವ, ಸತ್ಯಕ್ಕೆ ಅಂಟಿಕೊಳ್ಳುವ ಸಾಮರ್ಥ್ಯವನ್ನು ತಂದುಕೊಡುವುದು ಯೋಗ ಮತ್ತು ತಪಸ್ಸು. ಇವಿಲ್ಲದೆ ಚಾರಿತ್ರ್ಯಶಕ್ತಿ ಬೆಳೆಯಲಾರದು.

ಯೋಗ ಮತ್ತು ತಪಸ್ಸು ಎಂದಕೂಡಲೆ ಓದುಗರು ತಪ್ಪು ಅರ್ಥ ಮಾಡಿಕೊಳ್ಳುವ ಸಂಭವವಿದೆ. ಈ ಶಬ್ದಗಳಿಗೆ ನಮ್ಮ ಭಾಷೆಯಲ್ಲಿ, ಪರಂಪರೆಯಲ್ಲಿ ವಿಶಿಷ್ಟಾರ್ಥಗಳಿವೆ; ಸಂದರ್ಭೋಚಿತವಾದ ಅರ್ಥಗಳಿವೆ. ಯೋಗವು ಯೋಗಿಗಳ ಸೊತ್ತು; ತಪಸ್ಸು ತ್ಯಾಗಿಗಳ ಮತ್ತು ಸನ್ಯಾಸಿಗಳ ಸೊತ್ತು ಎಂದು ಅರ್ಥಮಾಡಿಕೊಂಡು ಕಾವಿ ಬಟ್ಟೆಗಳನ್ನು ಉಟ್ಟುಕೊಂಡವರೇ

ಯೋಗ-ತಪಸ್ಸುಗಳಿಗೆ ಯೋಗ್ಯತೆಯುಳ್ಳವರು ಎಂದು ಅರ್ಥಮಾಡಿಕೊಳ್ಳು ವುದು ತಪ್ಪು. ಯೋಗವು ಚಿತ್ತವೃತ್ತಿಯ ನಿರೋಧವು. ಯೋಗವು ಕಾರ್ಯ ದಲ್ಲಿಯ ಕೌಶಲವು; ಯೋಗವು ಸಾಧಕನಿಗೆ ಆದರ್ಶವಾದ ಮನೋವೃತ್ತಿಯು. ಸಾಧಕನೆಂದರೆ-ಗುರಿಯನ್ನು ಕಂಡುಕೊಂಡು ಅದರ ಸಿದ್ಧಿಗಾಗಿ ಸಂಕಲ್ಪ ಮಾಡಿ ಸಾಧನೆಯಲ್ಲಿ ತೊಡಗಿದವನು. ಮುಕ್ತಿಯು ಆತ್ಯಂತಿಕ ಆಧ್ಯಾತ್ಮಿಕ ಗುರಿಯಾಗಿದ್ದರೂ ಆನುಷಂಗಿಕವಾಗಿ ಮಧ್ಯಂತರವಾಗಿರುವ ಗುರಿಗಳು ಅನೇಕ. ಆ ದಾರಿಯಲ್ಲಿ ನಡೆಯುವವನು ಯೋಗಿ. ಅವನ ಸಾಧನೆ ಒಂದು ಯೋಗ. ಸಂಕಲ್ಪದಿಂದ ಸಿದ್ಧಿಯ ಕಡೆಗೆ ನಡೆಯುವ ಸಾಧನೆಯ ಕಾಲದಲ್ಲಿ ಧ್ಯೇಯ ಸಾಧನೆಗಾಗಿ ಕಳವಳ ಪಡುವುದೇ ತಪಸ್ಸು. ತಪವೆಂದರೆ ಬೇಯು ವುದು. ಅಂತರಂಗದ ಕುದಿತವೇ ತಪಸ್ಸು. ಈ ಒಳಕುದಿತವನ್ನು ಚಿತ್ತವೃತ್ತಿಯ ನಿರೋಧವನ್ನು ಸಾಮಾನ್ಯನು ಕಂಡುಕೊಳ್ಳಲಾರ. ಇವುಗಳನ್ನು ಗುರುತಿಸಲು ಬಾಹ್ಯ ವೇಷ ವ್ಯಾಪಾರಗಳು ಸಹಾಯಕವಾಗಲಾರವು. ಶಾಟೀ ಸುತ್ತಿ ಕೊಂಡವನು ಯೋಗಿಯಾಗಿರಬೇಕಿಲ್ಲ; ತಪಸ್ವಿಯೂ ಆಗಿರಬೇಕಿಲ್ಲ. ಶಾಟೀ ಸುತ್ತಿಕೊಳ್ಳದವನು ಯೋಗಿಯಾಗಿರಲಾರನೆಂದು ಹೇಳುವುದೂ ಧಾರ್ಷ್ಟ್ಯದ ಮಾತು. ಅಂತರಂಗದ ವ್ಯಾಪಾರಗಳನ್ನು ಆಂತರಂಗಿಕವಾಗಿಯೇ ಕಾಣ ಬೇಕು. ಆತ್ಮಿಕ ಬೆಳಗೆಯನ್ನು ಆಧ್ಯಾತ್ಮಿಕ ಅಳತೆ ಗೋಲಿನಿಂದಲೇ ಅಳೆಯ ಬೇಕು. ಬಹಿರಂಗ ವ್ಯಾಪಾರಗಳಿಂದ ಅಳೆಯುವುದಾದರೆ ಆ ವ್ಯಕ್ತಿಯ ಚಾರಿತ್ರ್ಯ ಶಕ್ತಿಯು ಪ್ರಕಟವಾದ ಸಂದರ್ಭ ಸನ್ನಿವೇಶದಿಂದ ತಿಳಿಯಲು ಒಮ್ಮೊಮ್ಮೆ ಸಾಧ್ಯವಾಗುವುದು.

ವಿನಾಯಕರು ಪುಣೆಯಲ್ಲಿ ಪ್ರಾಧ್ಯಾಪಕರಾದರು. ಪುಣೆಯು ಮರಾಠಿ ಗರ ಭದ್ರಸ್ಥಾನ. ಮಹಾರಾಷ್ಟ್ರದಲ್ಲಿ ಮನೆಗೊಬ್ಬರಂತೆ ತ್ಯಾಗಜೀವಿಗಳು ಸಂಸ್ಥೆಯ ಸಂಘಟಕರು. ಅಂತಹರ ಮಧ್ಯದಲ್ಲಿ ವಿಶ್ವಾಸ ಬೆಳಸಿಕೊಂಡು ಉದಾತ್ತ ಜೀವನವನ್ನು ನಡೆಸುವುದು ಸಾಮಾನ್ಯ ವಿಷಯವಲ್ಲ. ಚಾರಿತ್ರ್ಯ ಶಕ್ತಿಯಿಲ್ಲದೆ ಬದುಕುವುದೂ ಕಠಿಣವಾಗಿರುವ ವಾತಾವರಣದಲ್ಲಿ ಬದುಕಿ ಬಾಳಿ ಹೆಸರು ಪಡೆದುದು ಯೋಗ ಸಾಮರ್ಥ್ಯದಿಂದಲೇ ಎಂಬುದು ನಿಶ್ಚಿತ ವಾದ ಮಾತು. ಪರಪ್ರಾಂತದಲ್ಲಿಯೂ ಆತ್ಮೀಯರಾಗಿ ನಿಷ್ಠೆಯಿಂದ ಕಾರ್ಯ ಮಾಡಿದರು.

ನಿಷ್ಠೆಯು-ಭಕ್ತಿಯು-ಪ್ರೀತಿ ವಿಶ್ವಾಸಗಳಂತೆ ಸಂಬಂಧಾತ್ಮಕವಾದುದು. ನಿಷ್ಠೆ ತೋರುವುದು ತೋರಿಸುವವನ ಕರ್ತವ್ಯವಾಗಿರುವಂತೆ ನಿಷ್ಠೆ ಪಡೆದುಕೊಳ್ಳು ವುದು ಸಂಸ್ಥೆಯ ಕರ್ತವ್ಯವಾಗಿದೆ. ಪಿಸುಮಾತುಗಳನ್ನು ಕೇಳಿದ ಸಂಸ್ಥೆಯ ಸಂಚಾಲಕರಲ್ಲಿ ಸಂಶಯ ಪ್ರವೃತ್ತಿ ಮೂಡಿದರೆ ಸಂಸ್ಥೆಯಲ್ಲಿ ಸ್ವಾಭಿಮಾನಿ ವ್ಯಕ್ತಿಗಳು ಕೆಲಸ ಮಾಡುವುದು ಕಠಿಣವಾಗುವುದು. ಸಂಶಯವು ಸದ್ಭಾವ ವನ್ನು ಹಾಳುಮಾಡುವುದು. ಸಂಶಯವು ಸಲ್ಲದ ಸ್ವರೂಪಗಳನ್ನು ಸೂಚಿಸು ವುದು. ಆಗ ಯಾವುದೂ ಸರಿಯಾಗಿ ಕಾಣದು. ಅಂತಹ ಪರಿಸ್ಥಿತಿ ಒದಗಿ ದಾಗ ಮೇಲಧಿಕಾರಿಗಳ ಮತ್ತು ಸಂಚಾಲಕರ ಮನ ತೃಪ್ತಿಯಾಗುವಂತೆ ಕೆಲಸ ಮಾಡುವುದು ದುಸ್ತರವಾಗುವುದು. ಇಂತಹ ಪ್ರಸಂಗ ಒದಗಿ ಬಂದು ವಿನಾಯಕರು ಡೆ. ಎ. ಸೊಸಾಯಿಟಿಯಿಂದ ದೂರ ಸರಿಯಬೇಕಾಯಿತು. ಸೌಜನ್ಯದಿಂದ ದೂರ ಸರಿದು ತಮ್ಮಲ್ಲಿಯ ಸ್ವಾಭಿಮಾನ, ಸತ್ವ, ಚಾರಿತ್ರ್ಯ ಶಕ್ತಿಯನ್ನು ತೋರಿದರು. ಆ ಸಂಸ್ಥೆಗೆ ತ್ಯಾಗಪತ್ರ ಕೊಟ್ಟು ಹೊರಬಿದ್ದರು.

ಮುಂದಿನ ಮೂರು ನಾಲ್ಕು ವರುಷಗಳೆಂದರೆ ಅವರ ಜೀವನದಲ್ಲಿಯ ತಳಮಳದ ಕಾಲ. ಈ ಸಂಧಿಕಾಲದಲ್ಲಿ ಪಡಬೇಕಾದ ಮಾನಸಿಕ ಯಾತನೆ ಅಷ್ಟಿಷ್ಟಲ್ಲ. ಯಾತನೆಗಳು ಆವರಿಸಿ ಮುತ್ತಿದಾಗ ಆತ್ಮಶಕ್ತಿಯು ಬೆಳಕು ತೋರಿ ಸಮಾಧಾನವನ್ನು ತಂದುಕೊಡುತ್ತಿತ್ತು. ನೌಕರಿಯ ನಿಮಿತ್ತವಾಗಿ ಅಲೆದಾಡಬೇಕಾದಾಗ ಅಲ್ಲಲ್ಲಿ ಹೊಸ ಪರಿಚಯದ ಲಾಭವಾಗುತ್ತಿತ್ತು. ಅಲ್ಲಿಯೂ ಕೂಡ ಗುಣಗೌರವ ದೊರೆಯುತ್ತಿತ್ತು. ಹೈದರಾಬಾದದಲ್ಲಿ ಕೆಲಸ ಮಾಡುತ್ತಿದ್ದಾಗ ಶ್ರೀಮತಿ ಸರೋಜನಿ ನಾಯಡು ಅವರ ಪರಿಚಯ ವಾಯಿತು. ಪರಿಚಯವು ವಾತ್ಸಲ್ಯದ ಮಟ್ಟವನ್ನು ಕೂಡ ಮುಟ್ಟಿತು. ಆಗಾಗ್ಗೆ ಅವರ ಮನೆಯಲ್ಲಿ ಸೇರುತ್ತಿದ್ದ Poetry Society ಯಲ್ಲಿ ವಿನಾ ಯಕರು ತಮ್ಮ ಕವಿತೆಗಳನ್ನು ಓದುತ್ತಿದ್ದರು; ಕಾವ್ಯದ ಬಗ್ಗೆ ಚರ್ಚಿಸುತ್ತಿ ದ್ದರು. Romantic Conception of Poetry ಎಂಬ ವಿಷಯದ ಬಗ್ಗೆ ವಿನಾಯಕರು ಓದಿದ ಪ್ರಬಂಧವನ್ನು ಕೇಳಿ ಸರೋಜಿನಿ ನಾಯಡು ಅವರು ಬಹುವಾಗಿ ಕೊಂಡಾಡಿದರು. ದಿಗ್ವಿಜಯದ ದಾರಿಯಲ್ಲಿರುವಾಗ ಪ್ರಾಚಾ ರ್ಯರಾಗಿ ವೀಸನಗರ—ಗುಜರಾತ ಕಂಡರು. ಅಲ್ಲಿಂದ ರಾಜಾರಾಮ ಕಾಲೇಜ, ಕೊಲ್ಹಾಪುರ. ಆ ಮುಂದೆ ಕರ್ನಾಟಕ ಕಾಲೇಜ, ಧಾರವಾಡ.

ಬಿರುಗಾಳಿಯು ಹೊಡೆತಕ್ಕೆ ಸಿಕ್ಕ ಹಡಗದಂತೆ ಆದ ಪರಿಸ್ಥಿತಿಯಲ್ಲಿ ಸಮಾಧಾನ ತಂದುಕೊಡಲು ಶ್ರೀ. ಅರವಿಂದರ ತತ್ವಜ್ಞಾನವು ವಿನಾಯಕರಿಗೆ ನೆರವಾಗಿದೆ. ಬಾಲ್ಯದಿಂದಲೂ ಏನೋ ಕಳೆದುಕೊಂಡು ಹುಡುಕುತ್ತಿದ್ದ ಮನಸ್ಸಿಗೆ ತನಗೆ ಬೇಕಾದ ವಸ್ತು ದೊರಕಿತೆಂಬ ಸಮಾಧಾನವಾಯಿತು. ಶ್ರೀ. ಅರವಿಂದರ ತತ್ವವನ್ನು ತಾವು ಎರವಲಾಗಿ ತೆಗೆದುಕೊಂಡ ಭಾವನೆ ವಿನಾಯಕರಿಗಿಲ್ಲ. ತಮ್ಮ ಧ್ಯೇಯ ಸಾಧನೆಯಲ್ಲಿ ತಾವೇ ಮುಂದುವರೆದು ಯಾವ ಸಿದ್ಧಿಯನ್ನು ಮುಟ್ಟಬಹುದಾಗಿದ್ದಿತೋ ಅದು ಅವರಿಗೆ—ಶ್ರೀ. ಅರವಿಂವರ ತತ್ವದಲ್ಲಿ ಸಿಕ್ಕಿದೆ. ತಮ್ಮ ಮನೋವಿಕಾಸದ—ಪ್ರಜ್ಞಾವಿಕಾಸದ—ಬುದ್ಧಿವಿಕಾಸದ—ಆತ್ಯಂತಿಕ ಗುರಿಯನ್ನು ತಾವೇ ಪಡೆದುಕೊಂಡ ಹಾಗೆ ಅನ್ನಿಸಿದೆ ಆದ್ದರಿಂದ ಅವರ ಜೀವನದಲ್ಲಿ ಅರವಿಂದ ದರ್ಶನವು ಹೊರಗಿನಿಂದ ಬಂದು, ಆಕ್ರಮಿಸಿದ ವಸ್ತುವಲ್ಲ. ಸ್ವಸ್ಥಾನದಲ್ಲಿ ಸ್ವಧರ್ಮವಾಗಿ ಸ್ವಾಭಾವಿಕವಾಗಿ ಬೆಳೆದು ಬಂದ ದರ್ಶನವಾಗಿದೆ.

ಬಾಲ್ಯದಿಂದಲೂ ಪ್ರಪಂಚದ ಸಮಸ್ಯೆಗಳು ಕಣ್ಣು ಮುಂದೆ ಬಂದು ನಿಲ್ಲುತ್ತಿದ್ದವುಗಳಿಗೆ ಇಂದು ಪರಿಹಾರ ದೊರೆತಿದೆ. ಅಂದು ದುರ್ಗಾದೇವತೆಯ ಗುಡಿಯಲ್ಲಿ ಉಂಟಾಗುತ್ತಿದ್ದ ಅಸ್ಪಷ್ಟ ಆತ್ಮಿಕ ಅನುಭವಗಳಿಗೆ ಇಂದು ಸ್ಪಷ್ಟ ಅರ್ಥವು ಆಗುತ್ತಿದೆ ಶ್ರೀ ಪಂತಮಹಾರಾಜರ ಸನ್ನಿಧಿಯಲ್ಲಿ, ಅವರ ಪರಂಪರೆಯ ಭಜನೆ-ಆರತಿಗಳಲ್ಲಿ ಆಗುತ್ತಿದ್ದ ಭಾವಾವೇಗಗಳಿಗೆ ಇಂದು ಅರ್ಥವು ದೊರೆತಿದೆ. ಶ್ರೀ. ಬೇಂದ್ರೆಯವರ ಮಾತುಕತೆಗಳಲ್ಲಿ ಹೊರಬಂದ ಅನುಭಾವಿ ವಿಚಾರಗಳಿಗೆ ಅರ್ಥ ದೊರೆತಿದೆ. ಕಾವ್ಯಸ್ಫೂರ್ತಿಯನ್ನು ಒದವಿಸಿದ ನಿಸರ್ಗ ದೇವತೆಯು ಸರಸ್ವತಿ ದೇವಿಯೆಂದು, ಶಕ್ತಿಮಾತೆಯೆಂದು ಅರಿವು ಉಂಟಾಗಿದೆ. ವಿಶ್ವದ ಅಗಾಧತೆಯ ಬಗ್ಗೆ ಅಜ್ಞಾನದ ಮೂಲಕ ಭಯವುಂಟಾಗಿ ಅರ್ಥರಹಿತವಾದ ಕುತೂಹಲಕ್ಕೆ ಇಂದು ಅಭಯವೂ ಅರ್ಥವೂ ದೊರೆತಿದೆ. ಧರ್ಮ-ಕರ್ಮಗಳ ಅಂತರ, ಆಚಾರ-ವಿಚಾರಗಳ ಭೇದಭಾವ, ಮಾನವ ದೇವತೆಗಳ ಸಂಬಂಧ ಮುಂತಾದ ತೊಡಕಿನ ಪ್ರಶ್ನೆಗಳಿಗೆ ಪರಿಹಾರ ದೊರಕಿದೆ. ವಿಚಾರಪರನಾಗಿ ಸಮಾನ ದೃಷ್ಟಿಪಡೆದ ಸಮಾಧಾನದ ಜೀವನ ಇಂದಿನದಾಗಿದೆ.

ಈ ಅವಸ್ಥಾಂತರವನ್ನು ತಿಳಿದಾಗ ವಿನಾಯಕರ ಕಾವ್ಯದ ರಚನೆ ಮತ್ತು ಅದರ ಗರ್ಭಿತಾರ್ಥವು ತಿಳಿವುದು. ಕವಿಯನ್ನು ಕನಸಿಗನೆನ್ನಿರಿ,

ಕಲೋಪಾಸಕನೆನ್ನಿರಿ, ಕರ್ಮಯೋಗಿಯೆನ್ನಿರಿ, ಅವನು ಮುಖ್ಯವಾಗಿ ಅನುಭಾವಿಯು, ಎಂಬುದನ್ನು ಅರಿತರೆ, ಎಲ್ಲದರ ಅರ್ಥವಾಗುವುದು. ಜೀವನದ ದಾರಿಗುಂಟ ನಡೆವಾಗ ಪಡೆದ ಅನುಭುವಗಳ ಭಾವಸ್ವರೂಪಗಳು ಅವರ ಕವನಗಳಲ್ಲಿ ಪ್ರಕಟವಾಗಿವೆ. ಅನುಭವದ ಮಾತು, ಅನುಭಾವಿಯ ವಚನ ಅನುಭವಿಸಿದ ವ್ಯಕ್ತಿಯ ಶಬ್ದಗಳಿಂದಲೇ ತಿಳಿಯಬೇಕು; ವಿಮರ್ಶೆಯ ರೀತಿಯಿಂದಲ್ಲ. ವಿಮರ್ಶಕನು ನಿರ್ಮಾತೃವಲ್ಲ. ಶಾಸ್ತ್ರಸಮ್ಮತ ನಿಯಮುಗಳಂಕಿತವಾಗಿ ಅಳೆದು ನೋಡುವ ವ್ಯಾಪಾರಿ ಅವನು. ಬಂಜೆ ಬೇನೆಯನ್ನು ಅರಿಯಳೆಂಬಂತೆ, ವಿಮರ್ಶಕನು ನಿರ್ಮಾಣ ಕಾರ್ಯದಲ್ಲಿಯ ತಪವನ್ನು, ಅನುಭವವನ್ನು ಅರಿಯಲಾರ. ಕವಿಯ ಮಾತಿಗೆ, ಅವನ ಅನುಭವಕ್ಕೆ ಬೆಲೆಕೊಟ್ಟು ಅವನ ಸ್ಥಾನದಲ್ಲಿ ನಿಂತು ಸಾಧ್ಯವಾದರೆ ಅನುಭವಿಸಿ ರಸಪಾಕದ ರುಚಿಯ ಬೆಲೆ ಕಟ್ಟಬೇಕು. ಆಗ ವಿಮರ್ಶಕನ ಮಾತಿಗೆ ಬೆಲೆ ಬರುವುದು ಅಲ್ಲಿಯ ತನಕ ಕವಿಯ ಮಾತೆ ಕೊನೆಯ ಮಾತು.

---

೪

## ಕವಿತೆಗಳು

| | |
|---|---|
| ಕಲೋಪಾಸಕ | ಹಿಗ್ಗು |
| ಪಯಣ | ನವ್ಯ ಕವಿತೆಗಳು |
| ಸಮುದ್ರ ಗೀತಗಳು | ಬಾಳದೇಗುಲದಲ್ಲಿ |
| ಆಕಾಶ ಗಂಗೆ | ಉಗಮ |
| ಅಭ್ಯುದಯ | ದ್ಯಾವಾ-ಪೃಥಿವೀ |

ಮಾಧ್ಯಮಿಕ ಶಾಲೆಯಲ್ಲಿದ್ದಾಗಲೇ ಕಾವ್ಯಸ್ಫೂರ್ತಿ ಒಡಮೂಡಿದ್ದರೂ ಪ್ರಕಟವಾಗಿ ಕಾವ್ಯಪ್ರಪಂಚಕ್ಕೆ ಬಂದು ಸೇರಿ ವಿನಾಯಕರು ಇಪ್ಪತ್ತೈದು ವರುಷಗಳ ಮೇಲಾದುವು. ಹನ್ನೆರಡು ವರುಷಗಳಿಗೊಂದು 'ತಪ' ಎಂದು ನಮ್ಮ ದೇಶದ ಸಾಂಸ್ಕೃತಿಕ ಹೆಸರು. ಹಾಗೆ ನೋಡಿದರೆ ಮೂರ ತಪಗಳ ಮೇಲಾಯಿತು, ವಿನಾಯಕರು ಕವಿಯಾಗಿ. ಮೊದಲ ತಪವು ತಪವಾಗಿಯೆ ಒಳಗೆ ಉಳಿದಿದೆ. ಮುಂದಿನ ಎರಡು ತಪಗಳಲ್ಲಿ ಪ್ರಕಟವಾಗಿದೆ.

ಮೊದಮೊದಲು ಇಂಗ್ಲಿಶ ಭಾಷೆಯೆ ಪ್ರಕಟನೆಯ ಮಾಧ್ಯಮವಾಗಿದ್ದಿತು. ಶ್ರೀ. ಬೇಂದ್ರೆಯವರ ಸಹವಾಸದ ಮೂಲಕ ಕನ್ನಡವು ಮಾಧ್ಯಮವಾಯಿತು. ಕನ್ನಡವು ಉತ್ತರ ಕರ್ನಾಟಕದಲ್ಲಿ ತಲೆಯೆತ್ತಿ ನಿಲ್ಲಲು, ಗಳಗನಾಥ, ಕೆರೂರ ವಾಸುದೇವಾಚಾರ್ಯ, ವಲ್ಲಭ ಮಹಾಲಿಂಗ ತಟ್ಟಿ ಈ ಯುಗಪ್ರವರ್ತಕರ ಕಾಲ ಸಂದಿ ಹೋಗಿ, ಹೊಸ ಕನ್ನಡದ ಚಿಗುರು ಮೂಡಲು ಧಾರವಾಡದಲ್ಲಿ ರೂಪು ತಾಳಿದ ಗೆಳೆಯರ ಗುಂಪು ಮೂಲ ಕಾರಣವೆಂದು ಹೇಳಬಹುದು. ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಗೆಳೆಯರ ಗುಂಪಿನದು ವಿಶಿಷ್ಟ ಸ್ಥಾನವಾಗಿದೆ. ಇವರ ಕಾರ್ಯದಿಂದ ಸಾಹಿತ್ಯದಲ್ಲಿ ಹೊಸ ಯುಗವು ಪ್ರಾರಂಭವಾಯಿತೆನ್ನಬಹುದು. ಗುಂಪಿನ ಗೆಳೆಯರು ಪಾಶ್ಚಾತ್ಯ ಮಾದರಿಯ ವಿದ್ಯಾ-ಸಂಸ್ಕಾರ ಪಡೆದವರು. ಕನ್ನಡ ತನವನ್ನು ಮೈಗೂಡಿಸಿಕೊಂಡವರು. ಆಂಗ್ಲ ಸಾಹಿತ್ಯದ ವಿವಿಧ ಮುಖಗಳನ್ನು ಕಂಡು ಅದರ ರಸವನ್ನು ಉಂಡು

ಕನ್ನಡವಲ್ಲಿ ಅದರ ಪಾರಿಣಾಮಿಕ ಫಲಗಳನ್ನು ತಂದವರು ಇವರು. ಬಿ. ಎಂ. ಶ್ರೀಕಂಠಯ್ಯನವರು ತಮ್ಮ ಇಂಗ್ಲಿಷ ಗೀತಗಳು, ಎಂಬ ಪುಸ್ತಕದ ಪ್ರಾರಂಭದಲ್ಲಿ ಹೇಳಿದಂತೆ, ' ಅವಳ ತೊಡಿಗೆಯುನ್ನು ಇವಳಿಗೆ ಇಡಿಸಿದವರು '. ಅಲ್ಲದೆ ಅಚ್ಚ ಕನ್ನಡ ಛಂದ-ಬಂಧಗಳನ್ನು ಪ್ರಯೋಗಿಸಿ ಹೊಸ ಸಾಹಿತ್ಯ ನಿರ್ಮಿಸಿದವರು. ಹಳ್ಳಿಗಳಲ್ಲಿ ಬಾಯಲ್ಲಿ ಬೆಳೆಯದೆ ಉಳಿದಿದ್ದ ಕಾವ್ಯ ಪ್ರಕಾರಗಳನ್ನು ಹೊಸ ಭಾಷೆ-ಭಾವಗಳಿಗೆ ಅಳವಡಿಸಿ ಕನ್ನಡ ಸಾಹಿತ್ಯವು ಜನಜೀವನದ ಸತ್ವವನ್ನು ಪಡೆವಂತೆ ಮಾಡಿದವರು. ಈ ಪ್ರಯೋಗ ಶಾಲೆಯಲ್ಲಿ ವಿನಾಯಕರು ತರಬೇತಿ ಹೊಂದಿದವರು. ಈ ಪ್ರಯೋಗ ಶಾಲೆಯ ಹೊರಮುಖವು ಸಾಹಿತ್ಯ ಸೇವೆಯಾದರೆ, ಒಳಮುಖವು ಅನುಭಾವಿಕ ಆಧ್ಯಾತ್ಮಿಕ ಸಾಧನೆಯಾಗಿದ್ದಿತು. ಕಾವ್ಯ ಪ್ರಕಾರಗಳಿಗೆ, ಸೇವೆ ಸಾಧನಗಳಿಗೆ ಕವೀಂದ್ರ ರವೀಂದ್ರರು ಬೆಳಕು ತೋರಿದರೆ, ಕಾವ್ಯ ಸತ್ವ ಸಾಮರ್ಥ್ಯಗಳನ್ನು ಶ್ರೀ. ಅರವಿಂದರ ಆಧ್ಯಾತ್ಮಿಕ ಜೀವನ ವಿಚಾರಗಳ ಸ್ಫೂರ್ತಿ ಒದವಿಸಿತು ಹೀಗೆ ಇಬ್ಬಗೆಯಲ್ಲಿ ಸತ್ವಸ್ವರೂಪಗಳನ್ನು ಪಡೆದು ಸಾಗಿದ ಈ ಗುಂಪಿನ ಸದಸ್ಯರ ಕಾವ್ಯಗಳಲ್ಲಿ ಹೊಸ ಸತ್ವ ಚಿಮ್ಮತೊಡಗಿತು.

ಭಾವ ಗೀತಗಳು ವ್ಯಕ್ತಿನಿಷ್ಠ ಅನುಭವಗಳ ತಳಹದಿಯ ಮೇಲೆ ಆದಂತಹ ಕವನ ರಚನೆ. ಅಲ್ಲಿ ಕೇವಲ ಶಬ್ದಗಳ ಅರ್ಥ ನೋಡಿದರೆ ಆಗದು. ಶಬ್ದಗಳ ನಾದದಿಂದ ಹೊರಡುವ ಅರ್ಥವನ್ನು ವಾಕ್ಯಾರ್ಥಕ್ಕೆ ಜೋಡಿಸಿಕೊಳ್ಳಬೇಕು. ಜತೆಯಲ್ಲಿ ಅನುಭವದ ಅರ್ಥವನ್ನು ತಿಳಿಯಬೇಕು ಸಾಂಕೇತಿಕವಾಗಿರುವ ಶಬ್ದಗಳನ್ನು ಸಂಕೇತರಹಿತವಾಗಿ ತಿಳಿಯಲೆತ್ನಿಸಿದರೆ ಶಬ್ದವು ಬರಿಯ ಸಪ್ಪಳವಾಗಿ ಅರ್ಥವಿಲ್ಲದ ಶಬ್ದ ಜೋಡಣೆಯಾದೀತು. ಅದು ಅನುಭಾವಿಯ ಪ್ರಕಟನೆಯಾಗಿರುವುದರಿಂದ ಅನುಭವಿಸಿಯೇ ತಿಳಿಯಬೇಕು. ಅನುಭವವನ್ನು ಪಡೆಯಬೇಕಾದರೆ, ಅನುಭಾವಿಯ ಸ್ಥಾನದಲ್ಲಿದ್ದುಕೊಂಡೇ ನೋಡಬೇಕು. ಅನುಭವ ಸಾಮರ್ಥ್ಯವಿಲ್ಲದವರಿಗೆ, ಸಾನುಭೂತಿ ಇಲ್ಲದವರಿಗೆ ಈ ರಚನೆಗಳು ಶಬ್ದಾಡಂಬರವೆನ್ನಿಸೀತು. ಶಬ್ದಗಳ ವ್ಯರ್ಥ ಸಂಕಟಜಾಲವೆನ್ನಿಸೀತು. ಈ ಜಾಲ-ಆಡಂಬರಗಳ ಬಹಿರಂಗ ರೂಪವನ್ನು ದಾಟಿ ಅಂತರಂಗದ ಅನುಭವದ ಸತ್ವದ ದರ್ಶನ ಮಾಡಿಕೊಂಡಾಗ ಕವಿಯ ಹೃದಯವು, ಆದರ ಭಾವನೆಗಳ ಆವೇಗವು ತಿಳಿದು ರಸಾನುಭೂತಿಯಾಗುವುದು.

ಕಾವ್ಯವು ಅರಸಿಕರಿಗಾಗಿ ಅಲ್ಲ; ರಸಿಕರಿಗಾಗಿ ರಸಿಕತನವೂ ಒಂದು ಸಂಸ್ಕಾರ ಜನ್ಯವಾದ ಸಾಮರ್ಥ್ಯವೆಂಬುದನ್ನು ಮರೆಯಲಾಗದು.

ಕಳೆದ ಇಪ್ಪತ್ತೈದು ವರುಷಗಳಲ್ಲಿ ವಿನಾಯಕರ ಕವನಗಳ ಹತ್ತು ಸಂಕಲನಗಳು ಪ್ರಕಟವಾಗಿವೆ. ಮೊದಲನೆಯ ಪ್ರಕಟನೆಯಾದ 'ಕಲೋಪಾಸಕ'ವು ಎರಡನೆಯ ಪ್ರಕಟನೆಯಾದ 'ಪಯಣ'ದಲ್ಲಿಯ ಕವನಗಳ ರಚನೆಯಾದ ನಂತರದ ರಚನೆಯು. 'ಪಯಣ'ವು ೧೯೩೭ರಲ್ಲಿ ಪ್ರಕಟವಾಯಿತು. ಮೊದಲ ಮಾತು ಬರೆಯುತ್ತ ವಿನಾಯಕರು ಹೀಗೆ ಅಂದಿದ್ದಾರೆ: ಈಗ ಸುಮಾರು ಹತ್ತು ವರುಷಗಳಲ್ಲಿ ನಾನು ಬರೆದ ಕವನಗಳಲ್ಲಿ ಕೆಲವನ್ನು ಇಲ್ಲಿ ಆಯ್ದು ಕೊಂಡಿದ್ದೇನೆ. ಈ ಮಾತನ್ನು ೧೯೩೬ರ ಸಪ್ಟಂಬರದಲ್ಲಿ ಬರೆದದ್ದು. ಆದರೂ ಪಯಣದಲ್ಲಿ ಪ್ರಕಟವಾದ ಕವನಗಳು ೧೯೩೦-೩೩ರ ಅವಧಿಯಲ್ಲಿ ಬರೆದುವು ಎಂಬದು ಅಲ್ಲಿ ಕೊಟ್ಟ ದಿನಾಂಕಗಳಿಂದ ತಿಳಿದು ಬರುವುದು. ಪ್ರಕಟವಾದ ಕವನಗಳನ್ನು ಓದುವಾಗ ಇದಕ್ಕೂ ಮೊದಲು ಕವನ ಬರೆವ ರೂಢಿ ಇರಲೇ ಬೇಕು ಎಂಬ ಅಭಿಪ್ರಾಯವಾಗುವುದು.

'ಪಯಣ'ವು ೫೪ ಕವನಗಳ ಒಂದು ಸಂಕಲನ. ಇವುಗಳ ವಸ್ತು-ವಿಷಯ ಮತ್ತು ಶೈಲಿ-ಸ್ವರೂಪ ನೋಡಿದರೆ ಪ್ರಾರಂಭಿಕ ಪ್ರಯೋಗ ಕಾಲದ ಕವನಗಳು ಇವು ಎಂಬದು ತಿಳಿವುದು. "ಇಂದಿನ ಕವಿಗಳೆಲ್ಲ ಕೂಡಿ ಅದಕ್ಕೆ (ಹೊಸಗನ್ನಡ ಕಾವ್ಯ ಶೈಲಿಗೆ) ರೂಪ ಕೊಡುತ್ತಲಿದ್ದಾರೆ.....ಕೆಲವೆಡೆಗೆ ಒಬ್ಬರ ಶೈಲಿಯ ವರ್ಚಸ್ಸು ಇನ್ನೊಬ್ಬರ ಶೈಲಿಯ ಮೇಲೆ ಕಂಡುಬರುವಂತೆ ಸಹಜಸಿದ್ಧ ಸಾಮ್ಯಗಳೂ ಸಹ ಅಲ್ಲಲ್ಲಿ ಸಿಕ್ಕಬಹುದು." ಎಂದು ವಿನಾಯಕರೆ ಸೂಚಿಸಿದ್ದಾರೆ ಮೊದಲ ಮಾತಿನಲ್ಲಿ.

"ನುಡಿಗಾರ ನಾನಲ್ಲ. ಒಯ್ಯಾರದವನಲ್ಲ! ನುಡಿ ಎನಲು ನುಡಿವೆ ದೊರೆಯೆ!" ಎಂದು ಹೇಳಿ ತಮ್ಮ ಮನೋಭಾವನೆಯನ್ನು ವ್ಯಕ್ತಮಾಡಿದ್ದಾರೆ. ಹೃದಯದಲ್ಲಿ ಮೂಡಿದುದನ್ನು ಮೂಡಿದಂತೆ ಇಡುವವರು ತಾವು ಎಂದು ಹೇಳಿದ್ದಾರಲ್ಲದೆ, ದೇವನು 'ನುಡಿಯೆನಲು ನುಡಿವೆ'ನೆಂದು ಸಾರಿದ್ದಾರೆ. ಕವಿಯ ಜೀವನವನ್ನು ವಿವರಿಸುತ್ತ "ಕವಿಯ ಮಾತು ದೀಪಸ್ತಂಭದಂತದು; ನಿಂತು ಬೆಳಕನಾಂತುದು. ರಜನಿಯಲ್ಲಿ ತನ್ನ ಪ್ರಭೆಯ ಚೆಲ್ಲಿ ದಾರಿ ತೋರ್ಪುದು; ಅಭಯವನ್ನು ಬೀರ್ಪುದು" ಎಂದು ಹೇಳಿದ್ದಾರೆ. ಚೆಲವು

ಹೇಳುತ್ತಿದೆ; "ನಾನು ನಕ್ಕ ನಗೆಯು ಮೂರು ಲೋಕಗಳ ವಿಲಾಸವು....
ನಾನು ಪರಮ ದೈವ; ನಾನು ಒಲುಮೆಯು. ನನ್ನ ನೋಟ ಗೆಲವು, ನನ್ನ
ಠೀವಿ ಬೆರಗು ಗರುಮೆಯು." ಚೆಲುವು ಎಲ್ಲ ಬಗೆಯ ಆಕರ್ಷಣೆ. ಜೀವನವು
ಹೇಗಿರುವುದು?

"ಇಂದಿನ ಬಾಳಿನ ಬಯಕೆಯದೊಂದಿದೆ,ಮುಂದಿನ ಯುಗದಲಿ ಫಲಿಸುವುದು.
ಒಂದಿನ ಬರಲಿಹ ಬಾಳಿನ ಬಂಟರಿಗಿದರರ್ಥ ಪನದು ಕಲಿಸುವುದು!
ಧರೆಯೊಳು ದ್ವೇಷದ ಮೌಢ್ಯದ ಮೋಹದ ದುಃಖ್ಖಿನ್ನವ ತರಿದೊರೆಸುವುದು
ನಲುಮೆ, ಸತ್ಯ ಸೌಂದರ್ಯದ ಧ್ವಜವನು ಆಚಂದ್ರಾರ್ಕಂ ಮೆರೆಸುವುದು."

ಜೀವನವೆಂದರೆ ಪರಂಪರೆ. ಈ ಪರಂಪರೆಯ ಮಾತುಗಳನ್ನು ಕಂಡು ಉಸುರು
ವವರು ಕವಿಗಳು. 'ತಥಾಸ್ತು' ಎಂಬ ಕವನದಲ್ಲಿ ಹೇಗೆ ಹೇಳಿದ್ದಾರೆ.

"ಕಬ್ಬಿಗರ ಕನಸುಗಳೆ ಧಾರಿಣಿಯ ಮೂಲ ಸಿರಿ;
ಕರ್ಮಯೋಗಿಯ ಎದೆಯೆ ಸಾಯಕದ ಸಾಣೆಗಲ್ಲು
ಧ್ಯಾನ ಕರ್ಮಗಳೆರಡು ಜೀವಿತದ ಅಡಿಗಲ್ಲು.
ಮಾತಿದುವೆ ನರನು ಮುಗಿಲೆಡೆಗೆಸೆದ ಕವಣೆಗಲ್ಲು.
....ಉಳಿಯುವುದೆ ಲೋಕದ ರಹಸ್ಯಮಯ ಸಂದೇಶ....

ಬಾಳು ಬಾಳಿದರೇನೆ—ಉಳಿದರೇನೆ—ಅದು ಬಾಳು. ಇಲ್ಲದಿರೆ ಅದು ಹಾಳು
ಕವಿಯ ಮಾತು ಕೊನೆವರೆಗೂ ಉಳಿವ ಮಾತು. ಕೀರ್ತಿ ಬಾಳು ಧೃವನ
ಸೀಮೆಯ ಸೇವುದು. ಸಾಮಾನ್ಯವಾಗಿ

"....ಇರಬಹುದು ನಮ್ಮ ಬಾಳುವೆಯೊಂದು ಕ್ಷಣದ ಕನಸು." ಆದರೆ,

"ರವಿ ಚಂದ್ರ ತಾರೆಗಳಿಗೊಡನಾಡಿ ನಮ್ಮ ಮನಸು
ಅರಗಳಿಗೆಯರಗಳಿಗಳಾಗಿ ನಾವಳಿಯಬಹುದು.
ವಿಶ್ವಗಳಿಗರಸಾಗಿ ಜೀವವದು ಹೊಳೆಯಬಹುದು."

ಈ ಪ್ರಪಂಚದಲ್ಲಿ ನಿತ್ಯ ಶಾಶ್ವತವಾದುವೂ ನಾಶವಾಗಬಲ್ಲಂಥಹವೂ ಎಂಬ
ಎರಡ ವಿಧದಲ್ಲಿ ವಿಭಾಗಿತವಾದ ಸಂದರ್ಭದಲ್ಲಿ, ಕ್ಷಣದ ಕನಸಾಗಿದ್ದಂತಹ
ಬಾಳು ಅಳಿಯುವುದು. ಜೀವವು ವಿಶ್ವಗಳಿಗೆ ಅರಸಾಗಿ ಉಳಿಯಬಹುದು.

ಇದು ಕವಿಯ ಜೀವದಿಂದ ಉಂಟಾದ ಮಾತು; ಅದು ಶಾಶ್ವತ ಎಂದು ಸೂಚನೆ.

ಮೌನವು ಪಶುಗಳ ಲಕ್ಷಣವೆಂದು ಹಲವರು ಹೇಳುತ್ತಾರೆ. ಆದರೆ ಮೌನವು ಮಾನವನಿಗೆ ಆತ್ಮಿಕ ಶಕ್ತಿಯನ್ನು ತಂದುಕೊಡುವುದು. ಒಳನೋಟದಿಂದ ಅರಿವು ಮೂಡುವುದು. ಮೌನವು—

"ತನ್ನ ತಾನರಿವುದಕೆ ಬಂದಳು; ನಿನ್ನರಿವ ಕೊನರಿಸಲು ಬಂದಳು
ಘನ್ನ ಮಹಿಮನ ಕೀರ್ತಿಯನು ಮಂಡಿಸುತ ಬಂದಿಹಳು.
ಮನ್ನಿಸುತ ಸೀನವಳ ಪ್ರೇಮವನಿನ್ನು ಕಾವ್ಯದ ಹುಸಿನಗೆಯ ಮರೆ;
ನಿನ್ನ ಜೀವನವೆಲ್ಲ ಕಾವ್ಯದ ಸ್ಫೂರ್ತಿಯಾಗಿರಲಿ."

ಮೌನವು ಧ್ಯಾನಕ್ಕೆ ಅನುಕೂಲವಾಗಿರುವುದು; ಅದು ತನ್ನನ್ನು ಗುರುತಿಸಿಕೊಳ್ಳಲು ನೆರವಾಗುವುದು. ಆಗ ದೇವನ ಕಲ್ಪನೆಯೂ ಅವನ ಸರ್ವಶಕ್ತತೆಯೂ ಒಡಮೂಡಿ ಮೌನಿಯು ಭಕ್ತನಾಗುವನು. ಆಗ ಅವನದು ಆರ್ತ ನಾದ. ದೇವನನ್ನೆ ಮೊರೆ ಹೊಕ್ಕು ಸಂರಕ್ಷಣೆ ಸಮಾಧಾನ ಪಡೆವನು. 'ಮೊರೆ' ಎಂಬುದು ಇದನ್ನೆಲ್ಲ ಹೇಳುವುದು:

"ಅನುಗೋಲೆ ಇಲ್ಲದಾ ಹೆಳವಸಾಗಿದಂತೆಯು
ಶರಧಿಯಲ್ಲಿ ಬಿಸುಟಿದಾ ಬಳ್ಳಿ ತೇಲುವಂತೆಯು
ಭಾನು ಗೋಲವಿಲ್ಲದಾ ಜಗವು ಬದುಕುವಂತೆಯು
ಸಾಗುತಿಹುದು ತೇಲುತಿಹುದು ಬದುಕುತಿಹುದು ಜೀವನ
ಎಂದು ಬರುವಿ? ಎಂದಿಗಹುದು ನನ್ನ ಬಾಳು ಪಾವನ."

ಹೀಗೆ ಬಾಳು ತೇಲುತ್ತ ಸಾಗುತ್ತಿದೆಯೆಂಬ ಅರಿವು ತಾನು ಮಾಡುವದೊಂದು ವಿಧಿಯು ತೋರುವುದೊಂದು ಎಂಬ ಅರಿವಿನೆಡೆಗೆ ನೂಕುವುದು:

"ಅಕಟಕಟಾ! ಮಾನವನ ಬಾಳುವೆಯ ಗುರಿಯೊಂದು
ಬೇರೊಂದು ಕಾಣಿಸುತ ನಿಂತಿಹುದು ವಿಧಿಯು."

ಎಂದು 'ಬಾಳುವೆ'ಯಲ್ಲಿ ನುಡಿದಿದ್ದಾರೆ. ಬಾಳುವೆಯೊಂದು 'ಬೇಟೆ.' ಇಲ್ಲಿ ಒಬ್ಬನಿಗೆ ಅನ್ನ. ಅದೇ ಇನ್ನೊಬ್ಬನಿಗೆ ಬನ್ನ. ಬಡವನು ಶ್ರೀಮಂತನಿಂದ

ಬೇಟೆಯಾಡಲ್ಪಡುವ. ಯತಿಯು ಗೃಹಸ್ಥನ ಹೆಂಡತಿಗೆ ಮನಗೊಡುವ. ಬಂಜೆಯು ಮಗ್ಗುಲ ಮನೆಯ ಮಗುವನ್ನು ನೋಡಿ ತಡೆದುಕೊಳ್ಳಲಾರದೆ ವಿಷ ಕುಡಿಸುವಳು. ಬೇಟೆಯಿಂದ ಬದುಕು ಚೆನ್ನಾಗಿ ಆಗಬಹುದೆ? ಆಗ ಲಾರದು, ಅದಕ್ಕೆ ಬೇರೆ ಪರಿಹಾರ. ಸಹನೆಯೆ ಪರಿಹಾರ. 'ಬಾಳು' ಎಂಬ ಕವನವು ವಿಶ್ವದ ಮುಂದಿರುವ ಪ್ರಶ್ನೆ: ಬಾಳು ಎಲ್ಲಿಂದ ಬಂತು? ಯಾಕೆ ಬಂತು? ತಿಳಿಯದು, ಎಂದು ಅದರ ಅಗಾಧತೆಯನ್ನು ಒಂದೆಡೆಗೆ ಅಚ್ಚರಿಬಟ್ಟು ಹೇಳಿದರೆ, ಸಾಂಕೇತಿಕವಾಗಿ ಬಾಳುವೆಯು 'ಬಾಡಿಗೆ ಎತ್ತಿ'ನ ಹಾಗೆ ಎಂದು ಉಸುರುವರು. "ಮೂಕರಾಗಿರುವ ಮೂಕವನು ಹೊರುತ ನಡೆದಿಹೆವು."

ಸಂಕಲನದ ಹೆಸರು ಧರಿಸಿದ 'ಪಯಣ' ಕವನವು ವಿನಾಯಕರ ಮನದಾಳವನ್ನು ತೋರುವುದು. ಜೀವನವು ಒಂದು ಪ್ರವಾಹ. ನಿರಂತರ ಪ್ರವಾಹ. ಅದರ ದಾರಿಯಲ್ಲಿ ಎಲ್ಲರೂ ಪಯಣಿಗರು. ಎಲ್ಲರೂ ಸಾಗಿಹರು. ಎಲ್ಲಿಗೆ? ಯಾರಿಗಾದರೂ ತಮ್ಮ ದಾರಿ ಕಂಡಿರುವುದೆ? ಎಲ್ಲೆಲ್ಲೂ ಹನಿ ಮಂಜು. ಆ ಮಂಜಿನಾಚೆಗೆ ನಿಂತು ನಗುತಲಿಹ ಬೆಳಕು. ಆಡಿಸುವ, ಓಡಿ ಸುವ, ಹಾಡಿಸುವ ಬೆಳಕು. ಅದರತ್ತ ಸಾಗಿರುವ ಅರ್ಧನಯನವ ಮುಚ್ಚಿ ನಡೆವ ದಾರಿಗರು. ಏಕೆ ಹೊರಟಿಹರು? ಮಂಜು ಹಿಡಿಯಲು ಎಂದೋ, ಬೆಳಕು ಕಾಣಲು ಎಂದೋ? ಬಲ್ಲರಾರವರಿಂತು ನಡೆದಿರಲು ಮುಂದೆ? ಎಂದು ಪಯಣವನ್ನು ಬಣ್ಣಿಸಿ ಪ್ರಶ್ನಾರ್ಥಕವನ್ನು ಇಟ್ಟು ಉತ್ತರಕೊಡದೆಯೂ ಯಥಾವತ್ತಾದ ಚಿತ್ರ ಕೊಟ್ಟಿದ್ದಾರೆ. ಪ್ರಪಂಚದ ಪಯಣದಲ್ಲಿ ಸಾಗಿರುವವರು ಎಲ್ಲರೂ ಸಾಗುತ್ತಿರುವರು; ಯಾರ ಗುರಿಯು ಏನಿದೆಯೋ ತಿಳಿಯದು. ಹತ್ತಿರವಿದ್ದರೂ ನೆಲೆ ಹತ್ತದು.

'ಪಯಣ' ಕವನವು ಒಂದು ಬಗೆಯಿಂದ ವಿನಾಯಕರ ಅಂತರಾಳ ದಲ್ಲಿಯ ಮಾತು ತೋರಿದರೆ 'ನಾಡಿನ ಹಾಡು' ಇನ್ನೊಂದು ಮೈತೋರು ವುದು. ಕನ್ನಡತನವು ಎದ್ದು ಬರಬೇಕು. ಕನ್ನಡಿಗರು ಮುಂದಾಗಬೇಕು ಎಂಬ ಒಳಕುದಿಯಿದ್ದು ಹೊರಬಂದ ಕವನವಿದು.

**"ತಾರೆಗಳು ಮೇಳವಿಸಿ ಬಂದು ಬಿಟ್ಟಿಹ ಬೀಡು, ನಮ್ಮ ಕನ್ನಡದ ನಾಡು.**
**ತಾರೆಗಳ ಒಡಹುಟ್ಟು, ತಾರೆಗಳ ಒಡನಾಡಿ ನಮ್ಮ ಕನ್ನಡದ ಹಾಡು.**

ಭೂಪತಿಯು ಕವಿಯಾಗಿ ಕವಿ ಚಮೂಪತಿಯಾಗಿ ಮೆರೆದಿರುವ ನಮ್ಮನಾಡು
ಪತಿಯಿಲ್ಲದವಳಂತೆ ಗತಿಯಿಲ್ಲದಾಗಿಹುದು ಹೀನವಾಗಿಹುದು ನೋಡು !

....ಸಲಿಗೆಯನು ಬೆಳೆಸುತ್ತ ಸುಲಿಗೆಯನು ಮಾಡಿದರು ಕನ್ನಡಕೆ
ಬಂತು ಕೇಡು.

...ಬಾಳೋಣ ಏಳಿನ್ನು ! ಅರಸಾಗಿ ಆಳೋಣ ! ಮನೆಮುರುಕರನ್ನು
ಮುರಿದು.

ನಿನ್ನ ನಗೆಯೇ ಬೆಳ್ಳಿ ನಿನ್ನ ಮೊಗ ಚಂದ್ರಮನು ನಿನ್ನ ಮಗ ಸೂರ್ಯನಿರಲಿ.
ನಿನ್ನವರನುದ್ಧರಿಸಿ ಮನುವಂಶವನು ಹರಸಿ ಬೆಳಗುತಿಹ ಆರ್ಯನಿರಲಿ"

ಕನ್ನಡದ ನಾಡು ಕೀರ್ತಿವೆತ್ತ ನಾಡು; ಆದರೂ ಕೊಳೆಯುತ್ತ ಬಿದ್ದ ನಾಡು. ಸಲಿಗೆ ಕೊಟ್ಟು ಸೋತ ನಾಡು. ಈ ಪರಿಸ್ಥಿತಿಯನ್ನು ಬದಲಿಸಿ ಆಳುವರಸಾಗ ಬೇಕೆಂದರೂ 'ಮನುವಂಶವನು ಹರಸಿ ಬೆಳಗುವ ಆರ್ಯ'ನ ಹಾಗೆ ಉದಾತ್ತ ಜೀವನವು ಉಂಟಾಗಲಿ ಎಂಬ ಹಾರೈಕೆಯು ಧ್ಯೇಯ ಸಾಧನೆಯ ದೃಷ್ಟಿ ಯನ್ನು ಸೂಚಿಸುವುದು. ಇದೇ ಮಾತನ್ನೆ ಕೊನೆಯಲ್ಲಿಯ ಕವನವಾದ ಭಾವಗೀತೆಯಲ್ಲಿ ಹೇಳಲಾಗಿದೆ.

....ಸಾಧಿಸುತ್ತ ಜಯಿಸುವುದೇ ಬಾಳುವುದರ ಸಾರವು.

ಪಯಣದಕಿಂತಲೂ ಮೊದಲು ಪ್ರಕಟವಾದುದು ಕಲೋಪಾಸಕ. ಅದು ೧೯೩೩ರಲ್ಲಿ ಪ್ರಕಾಶಿತವಾಯಿತು. ಇದರಲ್ಲಿಯ ರೀತಿಯೆ ಬೇರೆ. ಮೊದಲ ಪ್ರಕಟನೆಯೆಂದು ಮುನ್ನುಡಿಯಲ್ಲಿ ಕೆಲವೊಂದು ಮಾತುಗಳು ಬಂದಿವೆ. ಕನ್ನಡದಲ್ಲಿ ಹೊಸಗನ್ನಡ ಕಾವ್ಯಗಳು ಇನ್ನೂ ಕಡಿಯಾಗಿದ್ದ ಕಾಲ. ಹಳೆಯ ಛಂದ-ಬಂಧ ವೃತ್ತಗಳು ಹೊಸ ಜೀವನಕ್ಕೆ ಒಗ್ಗವು, ಎಂಬ ಅಭಿಪ್ರಾಯ ಮೂಡಿದ ಕಾಲ. ಹೊಸ ಪ್ರಯೋಗಗಳು ಜನರ ಮನಹಿಡಿಯು ವುವೊ ಇಲ್ಲವೊ ಎಂಬ ಸಂಶಯದ ಕಾಲ. ಹೊಸ ಕನ್ನಡದ ಹೊಸ ಪ್ರಯೋಗ ಗಳ ಬಗ್ಗೆ ವಿಮರ್ಶೆ ಮಾಡುವುದೇ ಆದರೆ ಅದರ ಸೂತ್ರಗಳು ಹೇಗಿರಬೇಕು ಎಂದು ಸಂಶೋಧನ ಮಾಡಿ ತಿಳಿದುಕೊಳ್ಳಬೇಕೆಂಬ ಕಾಲ. ಆದ್ದರಿಂದ ಓದುಗರಿಗೆ ಒಂದು ಪ್ರಶ್ನಾವಳಿಯನ್ನು ಸೂಚಿಸಿ ಅದಕ್ಕೆ ಉತ್ತರ ಪಡೆಯ ಬೇಕೆಂಬ ಲವಲವಿಕೆಯು ಇಲ್ಲಿ ಕಂಡು ಬರುತ್ತಿದೆ. ಕಾವ್ಯವನ್ನು ಓದುವ

ರೀತಿ, ಕಾವ್ಯಾನುಭವವನ್ನು ಪಡೆವ ರೀತಿ, ಒಂದು ಕೃತಿಯ ಯೋಗ್ಯತೆಯನ್ನು ನಿರ್ಣಯಿಸುವ ರೀತಿ ಇವುಗಳ ಬಗ್ಗೆ ಓದುಗರ ಅಭಿಪ್ರಾಯವನ್ನು ಕಂಡುಕೊಳ್ಳಬೇಕೆಂಬ ಆಸೆ.

'ಕಲೋಪಾಸಕ'ದಲ್ಲಿ ಆರು ಕಾವ್ಯಗಳು. ಅಲ್ಲಿನ ರೀತಿ ಸರಳರಗಳೆ (Blank Verse). ಕಥಾನಕವು ಕತೆಯಾಗಿ (Narrative) ಇರಬಹುದು. ಇಲ್ಲವೆ ಸಂವಾದಾತ್ಮಕವಾಗಿರಬಹುದು. ಆದರೂ ಅಲ್ಲಿ "ಒಂದೇ ಒಂದು ಸ್ವತಂತ್ರ ಕಲ್ಪನೆಯು ಪ್ರಧಾನವಾಗಿ "ರುವುದರಿಂದ ಈ ರಚನೆಗಳು ನೀಳ್ಗವಿತೆಗಳು. ಬೇಂದ್ರೆಯವರು ಬರೆದ ಪೂರ್ವಾರ್ಧ ಮುನ್ನುಡಿಯಲ್ಲಿ ಹೊಸ ಕನ್ನಡ ಕವಿತೆಗಳನ್ನು ನೋಡುವಾಗ ಇರಬೇಕಾದ ದೃಷ್ಟಿ, ಉತ್ತರಾರ್ಧವನ್ನು ಬರೆದ ವಿನಾಯಕರು ಕಾವ್ಯ ಸೃಷ್ಟಿಯ ಬಗ್ಗೆ ಹೇಳಿ ಓದುಗರಿಗೆ ಪುಸ್ತಕವನ್ನು ಓದಲು ನೆರವಾಗಿದ್ದಾರೆ. ಹೊಸದೆಂಬ ಮಾತ್ರಕ್ಕೆ ಹೀಯಾಳಿಸಬಾರದು ಎಂದು ಎಚ್ಚರ ಕೊಟ್ಟಿದ್ದಾರೆ. ಹೀಗೆ ಹೇಳುವುದು ಹೊಸತೇನಲ್ಲ. ಲಕ್ಷ್ಮೀಶನು ಕೂಡ "ವಿನೂತನ ಕವಿತೆಯೆಂದು ಕುಂದಿಟ್ಟು ಜರೆದೊಡೆ", ತಪ್ಪು. "ವಿದ್ವಜ್ಜನರಿದನು ಮತ್ಸರವನುಳಿದಾಲಿಸುವುದು" ಎಂದು ಹೇಳಿಕೊಂಡಿದ್ದಾನೆ. ಹಳೆಯದರ ಹುದುಲಲ್ಲಿ ಸಿಲುಕಿ ಅದೇ ಸೌಖ್ಯವೆಂದು ತಿಳಿವ ಜನತೆಗೆ ಹೊಸದೆಂದ ಕೂಡಲೆ ಹೆದರಿಕೆಯಾಗುವುದು ಸ್ವಾಭಾವಿಕವಾಗಿದೆ. ಆದಕ್ಕೆ ಎಚ್ಚರ ಮಾಡಬೇಕಾಗುತ್ತದೆ.

ಇಲ್ಲಿನ ಆರು ಕಾವ್ಯಗಳು ಬೇರೆ ಬೇರೆ ವಸ್ತುಗಳುಳ್ಳದ್ದಾಗಿವೆ. ಮೊದಲನೆಯದಾದ 'ಮಹಾಶ್ವೇತೆ' ಮೂಲ 'ಕಾದಂಬರೀ' ಗ್ರಂಥದಲ್ಲಿ ಬಂದ ಕತೆಯನ್ನು ಮಾರ್ಪಡಿಸಿದ ವಸ್ತುವಾಗಿದೆ. "ಪ್ರೀತಿಯು ಕೇವಲ ಮಾನಸಿಕವಾಗಿರಲಾರದು; ದೈಹಿಕವೂ ಆಗಿರಲಾರದು. ಇವೆರಡರ ಸಮಾಗಮವೇ ನಿಜವಾದ ಪ್ರೀತಿಯೆಂದು ನನಗನಿಸಿತ್ತು"....ಅಸುವಿನೊಲುಮೆಯೆ ಪ್ರೀತಿ ಎಂಬುದರ ದೃಷ್ಟಾಂತವು 'ಕಾದಂಬರೀ' ಗ್ರಂಥದಲ್ಲಿಯ ಮಹಾಶ್ವೇತೆಯ ಕತೆಯ ಸನ್ನಿವೇಶದಲ್ಲಿ ಕಂಡು ಬಂದುದರಿಂದ ಅದನ್ನು ಇಲ್ಲಿಯ ಕಾವ್ಯ ವಸ್ತುವನ್ನಾಗಿ ಮಾಡಿಕೊಂಡಿದ್ದಾರೆ. ಈ ಕಾವ್ಯ ೩ ದೃಶ್ಯಗಳಲ್ಲಿ ಮೂಡಿದೆ. ಆಡಿ ತೋರಿಸಲು-ಹಾಡುಗಾರಿಕೆಯಿಂದ ಆಡಿ ತೋರಿಸಲು ಅನುವಾಗುವಂತೆ ಇದೆ. ಕತೆ ಹೇಳುವಾಗ ಸರಳ ರಗಳೆಯ ಬಂಧವಿದೆ. ಅಲ್ಲಲ್ಲಿ ಹಾಡುಗಳು

ಇವೆ. ಮೂಲದಲ್ಲಿ ಇಲ್ಲದ ಒಂದು ತತ್ತ್ವ ವಿಧಾನ ಮಾಡಬೇಕಾದುದರಿಂದ ಅಲ್ಲಿಲ್ಲಿ ಮಾರ್ಪಡಿಸಿಕೊಳ್ಳಲಾಗಿದೆ. ಮೇಲಾಗಿ ಇಲ್ಲಿ ಅದು ದೃಶ್ಯಾವಳಿಯಾಗಿ ಬಂದಿದೆ. ಕೊನೆಗೆ ನಿರ್ಣಯಕ್ಕೆ ಬಂದ ಮಾತುಗಳು ಇವು.

" ಮೂರು ಲೋಕಗಳಲಿ ಒಂದೆ, ನೂರು ಜನ್ಮಗಳಲಿ ಒಂದೆ.
ಒಂದೆ, ಒಂದೆ, ಎಂದಿನಂತೆ ನಲುಮೆ ಒಂದಿದೆ.
" ದೇಹ ಪ್ರಾಣಗಳಲಿ ಒಂದೆ, ಸೃಷ್ಟಿ ದೃಷ್ಟಿಗಳಲಿ ಒಂದೆ
ಸತ್ಯದಂತರಾಳವನ್ನೆ ಪ್ರೀತಿ ಹೊಂದಿದೆ.
" ಮುಗಿಲಿನಿಂದ ಭೂಮಿಗಿಳಿದು ಭೂಮಿಯಿಂದ ನಭಕೆ ಬೆಳೆದು
ವಿಶ್ವಪುರುಷನಾಗಿ ನಲುಮೆ ನಗುತ ನಿಂತಿದೆ.
" ನಲುಮೆಯೊಡನೆ ಸಾಮರಸ್ಯವಿಹುದೆ ಜಗದ ಘನ ರಹಸ್ಯ
ಬಾಳ್ಮೆಯೆಂಬ ಕಥೆಯ ಮೂಲ ಸಾರವಿಂತಿದೆ "

ಪರಿಧಾನ-ವೇಷ-ನೇಪಥ್ಯ ವ್ಯವಸ್ಥೆ, ಸಂಗೀತ, ಹಿನ್ನೆಲೆ ವಾದ್ಯ ವಿಲಾಸಗಳಿಂದ ರಂಗದ ಮೇಲೆ ತಂದರೆ ಇದರಲ್ಲಿ ಅಡಕವಾದ ಭಾವನಾಮಯ ಪ್ರೀತಿ-ಪ್ರೇಮ ಇವುಗಳ ಚಿತ್ರಣವು ರಸಮಯವೂ ಸ್ಪಷ್ಟವೂ ಆಗುವುದರಲ್ಲಿ ಸಂದೇಹವಿಲ್ಲ. ದೃಶ್ಯಕಾವ್ಯವು ನೋಡುವಾಗಲೇ ಅದರ ರಸಾನುಭೂತಿಯಾಗುವುದು.

ಎರಡನೆಯ ಕಾವ್ಯವೂ ದೃಶ್ಯಾತ್ಮಕವಾದುದೆ. ಇದರ ಉಗಮವು ಹೀಗೆ: " ಒಂದು ದಿನ ನಾನು ಧ್ಯೇಯದ ವಿಶಾಲತೆಗೂ ಜೀವನದ ಸಂಕೋಚಕ್ಕೂ ಇರುವ ಅಂತರವನ್ನು ಅಳೆಯುತ್ತ ಕೂತಿದ್ದೆ. ಒಮ್ಮೊಮ್ಮೆ ಬಾಳುವೆಯ ಸ್ವರೂಪವು ಧ್ಯೇಯವನ್ನು ಬಹುಮಟ್ಟಿಗೆ ಹೋಲುವಂತೆ ತೋರಿದರೂ ಅದರಲ್ಲಿ ಧ್ಯೇಯದ ಒಳತಿರುಳೇ ಇರುವುದಿಲ್ಲ.'' ಎಂದು ವಿನಾಯಕರೆ ಹೇಳಿದ್ದಾರೆ. ಕನಸು ಕಾಣುವಾಗ ವ್ಯಕ್ತಿಯು ಒಬ್ಬನೇ ಇರುತ್ತಾನೆ. ಅವನಿಗೆ ಆಗ ಬಾಹ್ಯಜಗತ್ತಿನ ಪರಿವೆ ಇರುವುದಿಲ್ಲ. ತಾನು ಪಡೆಯಬೇಕಾದ ಗುರಿಯೊಂದು ಅವನಿಗೆ ಮುಖ್ಯ. ಗುರಿಯನ್ನು ಏಕಾಂಗಿಯಾಗಿ ಏಕಾಂತದಲ್ಲಿ ಪಡೆಯುವುದೇ ಆಗಿದ್ದರೆ ಕನಸು ನನಸಾಗುವ ಸಂಭವ ಇದೆ. ಆದರೆ ಬಾಳುವೆಯು ಲೋಕಾಂತದಲ್ಲಿ ನಡೆಯಬೇಕಾದುದು. ಏಕಾಂತಕ್ಕೂ

ಲೋಕಾಂತಕ್ಕೂ ಆಕಾಶ ಪಾತಾಳದ ಅಂತರ. ಲೋಕಾಂತದಲ್ಲಿಯ ವ್ಯವಹಾರವು ಬೇರೆ. ಆದ್ದರಿಂದ ಕೃತಿಗಳ ರೂಪು ರಚನೆ ಬೇರೆಯಾಗುವುದು. ಹೀಗಾಗಿ ಗುರಿ ಹುಡುಕುವ ದಾರಿ 'ತೀರದ ದಾರಿ' ಯಾಗುವುದು. ತೋರದ ದಾರಿಯೂ ಆಗಬಹುದು.

"ಅಲ್ಲಿ ನೋಡದೊ ಗೆಳೆಯ, ನನ್ನ ಕನಸಿನ ಗುರಿಯು **ಮಸಗಿ** ಕಾಣುತಲಿಹುದು....'' ಗುರಿಯು ಅಸ್ಪಷ್ಟವಾಗಿದೆ ಎಂಬುದು ಇದರ ತಿರುಳು. ಎಲ್ಲಿಯೋ ಇರುವ ರತ್ನ ಪಕ್ಷಿಯನ್ನು ಪಡೆಯಬೇಕೆಂಬಾಸೆ. ಕನಸಿನಲಿ ಕಂಡ ಪಕ್ಷಿಯನ್ನು ಅದು ಇರುವ ಅರಮನೆಯನ್ನು ಹುಡುಕುವ ಅಭಿಲಾಷೆ ಯಿಂದ ದಾರಿ ನಡೆಯುವರು ಗೆಳೆಯರು.

...."ನನ್ನ ಜೀವವನುಂಡ ಕನಸುಗಳು ಜೀವನದಿ,
ಮೂಡಿ ಬರಬೇಕೆಂದು ನಾನೆಳಸುತಿರುವಾಗ
ಮಣ್ಣಿನಲಿ ತಲೆಯೆತ್ತಿ ಮಲಿನತೆಯ ಹೊಂದಿಹವು.
ಅಲ್ಲ; ನನ್ನಯ ಪಯಣ ಮುಗಿವ ಕಾಲವಿದಲ್ಲ.
.... .... .... .... ಅಹುದು ತೀರದ ದಾರಿ.
....ಇಲ್ಲಿಹುದು ರತ್ನಪಕ್ಷಿಯ ನಾಮರೂಪವದು."

ಎಂದು ಸಾರುತ್ತ ಮುಂದೆ ಸಾಗಿರುವಾಗ, ದೂರದ ಮುಗಿಲೊಳಗಿಂದ ರತ್ನ ಪಕ್ಷಿ ಹಾಡುವುದು :

"....ರತ್ನಪಕ್ಷಿಯ ಪಡೆಯಲೆಂದು ಮನಸಿರಲು
ಕಾಂತಿಮಯವಾಗಿಸಲು ಒಂದು ಕನಸಿರಲು....
ಹಿಂತಿರುಗುವರೆ ಕಂದ ನೋಡುವರೆ ಹಿಂದೆ ?
ಬಾ ಮುಂದೆ ! ಬಾ ಮುಂದೆ ! ಬಾ ಮುಂದೆ ಮುಂದೆ !"

ಎಂದು ಹಾಡಿ ಪಕ್ಷಿ ಮಾಯವಾಗುವುದು. "ದಾರಿ ಕೊನೆವುಗುವನಕ ಜೀವಕಾಸರೆಯೆಲ್ಲಿ" ಎಂದು ನುಡಿವ ಗೆಳೆಯ. "ಅಹುದು ತೀರದ ದಾರಿ. ಆದರಿದರಿನಿ ದನಿಯು ಕರೆಯುತಿದೆ ಮುಂಬರಿಯದಿರುವ ಮಾನವನಿಹನೆ ? ಎಂದು ಕನಸಿನಲಿ ಕಂಡ ಗೆಳೆಯನುಸುರುವನು.

ಒಳಗೆ ಕಂಡದು ಹೊರಗೆ ದೊರಕುವುದಿಲ್ಲ. ಹೊರಗೆ ಕಂಡದ್ದು ಒಳಗಿರುವುದಿಲ್ಲ. ಧ್ಯೇಯವು ಯಾವಾಗಲೂ ಮುಂದೆ ಮುಂದೆ. ಸಿಕ್ಕರೆ ಆದರ ಧ್ಯೇಯವು ಇಲ್ಲದಾಗುವುದು. ಆದಕ್ಕೆ ಅದರತ್ತ ನಡೆಯುವುದು ತೀರದ ದಾರಿ.

ಕವಿಯು ಕನಸಿಗನಲ್ಲವೆ ? ಅನೇಕ ಬಗೆಯಾದ ಕನಸುಗಳನ್ನು ಅವನು ಕಾಣುವ. ಅವನ್ನು ಸತ್ಯಸೃಷ್ಟಿಗೆ ಇಳಿಸಲು ಪ್ರಯತ್ನಿಸುವ. ಮೂರನೆಯ ದೃಶ್ಯ ಕಾವ್ಯವಾದ 'ಪತನವೂ' ಒಂದು ಕನಸನ್ನು ಅವಲಂಬಿಸಿದುದು. "ಮಾನವನೆಂದರೆ ಪತನ ಹೊಂದಿದ ದೇವದೂತ" ದೈವೀಕರುಣೆಯು ಮಾನವನಲ್ಲಿದ್ದ ದುರ್ಬಲತೆಯನ್ನು ಮಾಯವಾಗಿಸುವ ತನಕ ಮಾನವನು ತನ್ನ ಉದ್ಧಾರಕ್ಕಾಗಿ ಕಾಯಬೇಕಾಗುವುದು. "ಇಲ್ಲಿರುವುದು ಕೇವಲ ವಿಚಾರವಲ್ಲ; " ನನ್ನ ಹೃದಯವನ್ನೇ ಆಲ್ಲೋಲಕಲ್ಲೋಲವಾಗಿಸಿದ ಒಂದು ಪ್ರತೀಕ ಭಾವನೆ'' ಎಂದು ವಿನಾಯಕರು ನುಡಿದಿದ್ದಾರೆ.

'ಸೆಳವು' ಸಂವಾದಾತ್ಮಕ ಕಾವ್ಯ. ಇದರಲ್ಲಿ ಎರಡು ಧ್ವನಿಗಳು. ಒಂದು ವ್ಯಕ್ತಿ—ಇನ್ನೊಂದು ಶಕ್ತಿ. ವ್ಯಕ್ತಿ ಮತ್ತು ಸಮಾಜ ಶಕ್ತಿಗಳಲ್ಲಿ ನಡೆದ—ನಡೆಯುತ್ತಿರುವ ಘರ್ಷಣೆಯು ಇದರ ವಸ್ತು.

"ಜನತೆಯನು ಜೀವರಂಗದಿ ಕುಣಿಸುತಿಹೆನ:" ಎಂದುಸುರುವುದು ಶಕ್ತಿ
"ಬಲ್ಲೆನೀ ಬಲೆಯಲ್ಲಿ ಸಿಕ್ಕವರ ಪಾಡ" ಎಂದು ಹೇಳುವನು ವ್ಯಕ್ತಿ.

''ಜೀವಿಸಲು ನೀ ಬಾಗು; ನನ್ನೆದುರು ಬಾಗು; ಇಲ್ಲದಿದ್ದರೆ ಹೋಗು ಪ್ರಾಣ ನೀಗು" ಎಂದು ಹೇಳಿತು ಶಕ್ತಿ.

''ವ್ಯಕ್ತಿ ಸಮುದಾಯವೇ ರಾಜ್ಯ-ಸಾಮ್ರಾಜ್ಯ, ವ್ಯಕ್ತಿ ಸ್ವಾತಂತ್ರ್ಯವಿದೆ. ಹೇಗೆ ಅಳಿಯುವೆವು" ಎಂದು ಕೇಳಿದ ವ್ಯಕ್ತಿ.

''ನನ್ನನರಿಯದರು ದುರ್ಭಾಗ್ಯರಿರುತಿಹರು; ನನ್ನನರಿತವರೆಲ್ಲ ಸಿರಿವಂತರಿಹರು; ನನ್ನ ವಂಚಿಸುವವರು ಹಂಚಿ ಹೋಗುವರು. ಸರ್ವಥಾ ಬೇಡಯ್ಯ; ನಂಜಿನ ಪರೀಕ್ಷೆ'' ಎಂದು ಎಚ್ಚರಿಕೆ ಕೊಡುವುದು ಶಕ್ತಿ.

''ಸಿರಿಯ ಸೆರೆಯೊಳಾಗಿ ನಾನಿರಲು ಒಲ್ಲೆ; ನಿನ್ನ ಸಂಪರ್ಕವಿಲ್ಲದೆ ಇರಲು ಬಲ್ಲೆ" ಎಂದು ವ್ಯಕ್ತಿ ಆವ್ಹಾನಿಸಿ ''ಆಕಾಂಕ್ಷೆಗಳಿಗೇನು ನೇಮ

ಇದೆಯೆ? ಅವಕೆ ವಶವಾದವಗೆ ಶಾಂತಿಯಿದೆಯೆ?" ಎಂದು ಸವಾಲು ಹಾಕುವನು.

ಈ ರೀತಿಯಲ್ಲಿ ಮಾತುಗಳು ಮಥಿಸಿ ಬಂದು 'ಸೆಳವಿ'ನಲ್ಲಿ ಎಳೆದು ಕೊಂಡು ಹೋಗುವುದು. ವ್ಯಕ್ತಿಯ ಸಾಮುದಾಯಿಕ ಜೀವನವೇ ಶಕ್ತಿ ಯಾದರೂ ಶಕ್ತಿಯಾಗಿ ಪರಿಣಮಿಸಿದಾಗ ವ್ಯಕ್ತಿಯ ವ್ಯಕ್ತಿತ್ವವು ಮಾಯ ವಾಗಿರುವುದು. ಈ ಶಕ್ತಿಯನ್ನು ಮುಟ್ಟುವ ಹಾಗೆ ವ್ಯಕ್ತಿತ್ವ ಬೆಳೆಯಿಸಿ ಕೊಂಡರೆ ಶಕ್ತಿಯು ಸದ್ದಡಗುವುಗು; ಇಲ್ಲದಿರೆ ವ್ಯಕ್ತಿಯು ಸದ್ದಡಗುವುದು:

"ನಾನಿಂದು ಮುಕ್ತ ಜೀವಿಯೆ ಆಹುದು....
ಮೇರೆಯಿಲ್ಲದ ಬಾಳ ಹೊನ್ನ ಕಣಿ ಲಭಿಸಿಹುದು.
ಆಯುಸವದಿನಿತಿಲ್ಲ; ಕೋಟಲೆಯ ಕುರುಹಿಲ್ಲ.
ಗಿರಿನಿರ್ಝರದ ತೆರದಿ ಸ್ವಚ್ಛಂದವಿರುತಿಹೆನು.
ನಿಮ್ಮಂತೆ ಮಾನಿಸನು ನಾನಾಗಿ ಜನಿಸಿದೆನು
ನಿಮ್ಮಂಥ ತಂದೆತಾಯಿಗಳೆನ್ನ ಸಲುಹಿದರು.
ಅಳವಿಲ್ಲದಿಹ ಪ್ರತಿಭೆ ಪ್ರಖರವಾಗಿಹ ತೇಜ
ಮಿಡಿಯಾಗಿ ನನ್ನೆದೆಯೊಳಂಕುರಿಸಿದವು.
ಒಮ್ಮೆ ಸಿಡಿಮಿಡಿಗೊಳ್ಳುವೆನು ಮನದಿ. ಮತ್ತೊಮ್ಮೆ
ಮನೆಯವಳ ಮೋರೆಯನು ನೋಡಿ ಮಿಡುಕುತಲಿಹೆನು.
"ಇರುವುದೆಲ್ಲವ ಭೋಗಿಸುತ್ತ ಮೀರಿರಬೇಕು
ಇದುವೆ ಯೋಗದ ಪರಮ ಸಾಧನೆಯು
ಬಡತನವೆ ಭಾಗ್ಯವೆಂದೆಣಿಸಬೇಕೆಂತಿರಲು
ನಿನಗೆ ಲಭಿಸುವುದು ದೇವನ ಕರುಣೆ. ಕವಿಹೃದಯ
ನಿನ್ನ ಸೊತ್ತಾಗಿಹುದು"
ನಾನಾದೆ ಕುಸುರಿಗನು ಚಿತ್ರಕಾರನು ಬಣ್ಣಗಳ ಶಿಲ್ಪಿ
ಒಂದೊಂದೆ ಮನದಲರಳಿಹ ನೋಟಗಳನು ತೆರೆಯಲಿ ಬರೆದು
ತೂಗು ಹಾಕಿರುವುದನು ಮನೆಯ ಮುಂಪಲೆಯುತಿಹ
ದಾರಿಹೋಕರು ನೋಡಿ ಬೆರಳಿಟ್ಟುಕೊಂಡರೆಲೆ!
ಜೀವಾಳವಿದೆ ಚಿತ್ರದೆಸಕದಲಿ,

ಯಾವ ಮಾರ್ಗದ ಕಲೆಯು? ಆನೆಗವಿಗಳದಲ್ಲ
ಕೈಲಾಸದಾಚೆಗಿನ ಜನರು ತಂದಿಹುದಲ್ಲ.
ಬಿಳಿಜನರ ಶೋಭೆಯಿದೆ; ಆದರನುದೇಶಿಕವು
ಅರ್ಥಪೂರ್ಣತೆಯಿಹುದು; ವಂಗಭಂಗಿಯದಿಲ್ಲ
ಕಲೆಯು ಜೀವದ ದಾಸಿ. ಕಾಲಕತ್ತಲೆ ಬಂದು
ಕವಿವಾಗ ಕಾಯುವಳೆ? ಎದೆಯೆಲ್ಲ ಕುದಿಗೊಂಡು
ಬಿರಿವಾಗ ನಿಃಸಹಾಯತೆ ಯಾಕೆ.
ಗೊತ್ತಿಲ್ಲದೀಗಾದ ನಾನೋರ್ವ-ಸನ್ಯಾಸಿ
"ಮೂಲ ಸತ್ಯದ ತಿಳಿವು ಎಲ್ಲದರ ಮೂಲವದು
ಅದರ ವಾಹನವಾದ ಕಲ್ಪನೆಯನಣಿಗೊಳಿಸು"

ಈ ಮಾತುಗಳನ್ನು ಬೆಂಬಲವಾಗಿಟ್ಟುಕೊಂಡು ಹೆಣೆದ ಒಬ್ಬ ಕಲೋಪಾಸಕನ ಕತೆಯಿದು. ಎಲ್ಲರಂತೆ ಕಲೋಪಾಸಕನೂ ಮಾನವನು. ಮದುವೆ, ಮನೆ, ಮಡದಿ, ಮಕ್ಕಳು ಇವೆಲ್ಲವೂ ಇಹುದು. ಆದರೆ ಅವನು ಇಲ್ಲಿದ್ದರೂ ಇಲ್ಲಿಯೇ ಇರುವುದಿಲ್ಲ. ಬಡತನವು ಮನೆತನವ ಅಡಗಿಸುವುದು. ಎಲ್ಲವನು ಬಿಟ್ಟು ಹಿಮಾಚಲಕ್ಕೆ ಹೋಗಿ ಗಂಗೆಯುದಕದಲ್ಲಿ ಲೀನನಾಗುವನು. ಆಡಿದ ಮಾತು; ಮಾಡಿದ ಕೆಲಸ ಎಲ್ಲವೂ ಗಂಗೆಗೆ ಮುಡುಪಿಟ್ಟ ತವಸಿಯಂತೆ ಆಗುವನು.

ಕಲೋಪಾಸಕನು ಮಾನವನಾದರೂ, ಸಾಮಾಜಿಕ ವ್ಯಕ್ತಿಯಾದರೂ ಅವನ ಜೀವನವೇ ಬೇರೆ. ಅದರ ನೀತಿ ನಿಯಮಗಳೇ ಬೇರೆ. ಅವನ ಸತ್ವ ವಿಕಾಸವಾಗಲು ಸಮಾಜದ ಸಾನುಭೂತಿ ಬೇಕು.

ಕೊನೆಯ ಕಾವ್ಯವಾದ ತಾಯವ್ವನ ಸಮಾಧಿ ಒಂದು ವಿಚಿತ್ರ ಕತೆಯಂತಿದೆ. ಕಾರಣ ಅದೂ ಒಂದು ಕನಸಿನ ರೂಪವು. ಒಂದು ಗಂಡ-ಹೆಂಡಿರ ಜತೆಗೆ ಮಗುವಾಗುವುದು. ಮಗುವು ಸಾಯುವುದು. ಗಂಡನ ಕೋಪವೇ ಕಾರಣವೆಂದು ಬಗೆದ ಹೆಂಡತಿಯು ಮಗುವನ್ನು ತೆಗೆದುಕೊಂಡು ಅಡವಿಗೆ ಓಡಿಹೋಗುವಳು. ಮಗುವಿನ ಮೊಗದ ಮೇಲಿನ ನಗೆಯು ಅವಳಿಗೆ ಭ್ರಮೆ ತಂದು ಮಗು ಇನ್ನೂ ನಿದ್ರಿಸುತ್ತಿದೆ ಎಂದು ಬಗೆವಳು. ಉಟ್ಟ ಸೀರೆಯ ಚುಂಗು ಹರಿದು ಮಗುವನ್ನು ಕಟ್ಟಿ, ಒಂದು ಗಿಡಕ್ಕೆ ತೂಗು ಹಾಕುವಳು.

ಹೋಗುವಳು. ಮರಳಿ ಬಂದಾಗ ಅಲ್ಲಿ ಮಗುವಿರುವುದಿಲ್ಲ. ಗಿಡದಿಂದ 'ಆ. ಊ' ಎಂದು ಕೇಳಿ ಬರುವುದು. ಆಗ ಅವಳು ಹೀಗೆ ನುಡಿವಳು:

"ಮರದ ಒಳಮೈಯಿಂದ ಬಂದ ಊರವವು
ಭೈರವನ ನಾಟ್ಯವಲ್ಲ.
ನನ್ನ ಪ್ರಾಣದ ಗಿಳಿಯು ಅಲ್ಲಿಂದ ನುಡಿಯುತಿರೆ
ಅದು ಏನು ಚೋದ್ಯವಲ್ಲ.

ಮರಳಿ ಊರಿಗೆ ಬಾಯೆಂದು ಗಂಡ, ಊರರಸ, ಹೆಂಗಳೆಯರು ಕರೆದರು. ಅದಕ್ಕೆ ಅವಳು ಉತ್ತರಿಸಿದಳು: ಇಲ್ಲಿಹುದು ಸ್ವನಿವಾಸ. ಇಲ್ಲಿಹುದು ನನ್ನೆದೆಯು ತೆರೆದ ನಾಡು."

ವಂದಿಸುತ ಕಳುಹಿದಳು ಗಂಡನನು, ಹಿರಿಯರನು. ಅವಳ ಸಮಾಧಿ ಅಲ್ಲಿಯೇ ಆಯಿತು.

ಈ ಕಲೋಪಾಸಕ ಸಂಕಲನದಲ್ಲಿರುವ ಸೂತ್ರಗಳು ಇವು. ಒಂದು ಕನಸುಗಳ ಹಿನ್ನೆಲೆಯಾಗಿವೆ. ಒಂದೊಂದು ಭಾವನೆ ಪ್ರಧಾನವಾಗಿದೆ. ಒಲುಮೆ, ಸತ್ಯ, ಸೌಂದರ್ಯ, ವ್ಯಕ್ತಿ-ಶಕ್ತಿಯ ಘರ್ಷಣೆ, ಕಲೋಪಾಸನೆ, ಕರುಣೆ. ಸರಳ ರಗಳೆಯೆ ಮುಖ್ಯ ಛಂದ ಬಂಧ. ಆದರೂ ಅಲ್ಲಲ್ಲಿ ಷಟ್ಪದಿ ಹಾಡು, ಇತರ ರೀತಿಯೂ ಕಂಡು ಬರುತ್ತಿದೆ. ಕಣ್ಣಿಗೆ ಕಾಣುವ ಕತೆಯೊಂದು; ಅದರಿಂದ ಉಂಟಾಗುವ ಪಾರಿಣಾಮಿಕ ಪಾಠ ಇನ್ನೊಂದು. ಹೀಗೆ ಇರುವುದರಿಂದ ಒಮ್ಮೊಮ್ಮೆ ಇವು ಒಂದು ಬಗೆಯ ರೂಪಕಗಳೇನೋ ಎಂದು ಅನ್ನಿಸುವುದು.

ಸರಳ ರಗಳೆಯ ಓಟವು ಶಬ್ದ ಜೋಡಣೆಯು, ಅದರಿಂದ ಹೊಮ್ಮುವ ಚಿತ್ರಗಳು, ಇವು ಒಂದಕ್ಕೊಂದು ಪೋಷಕವಾಗಿ ಕಾವ್ಯಕ್ಕೆ ಕಳೆಯನ್ನು ತಂದು ಕೊಡುವುವು.

ವಿನಾಯಕರು ೧೯೩೬ ರಲ್ಲಿ ಇಂಗ್ಲಂಡಕ್ಕೆ ಹೋದರು. ಹಡಗದ ಮೇಲೆ ಮಾಡಿದ ಪ್ರವಾಸವದು. ದೇಶ ಬಿಟ್ಟು ವಿದೇಶಕ್ಕೆ ಹೊರಟ ಅವರ ಮನಸ್ಸಿಗೆ ಕಂಡ ವಸ್ತುವೂ ಒಂದೊಂದು ವಿಷಯ ಹೇಳುತ್ತಿದ್ದಿತು. ಏಕಾಂತತನವನ್ನು ತಪ್ಪಿಸುತ್ತಿತ್ತು. 'ಸಮುದ್ರ ಗೀತಗಳು' ಈ ಸಂಕಲನದಲ್ಲಿ (೧೯೪೦) ಅವರ

ಈ ಪ್ರವಾಸ ಕಾಲದ ಪ್ರತಿಕ್ರಿಯೆಗಳು ಮೂಡಿವೆ. ಇದರಲ್ಲಿ ಐದು ಭಾಗಗಳು; ಕಡಲು, ಕಡಲ ತೀರ, ಹಡಗ, ಬ್ರಿಟನ್ನಿನ ದ್ವೀಪದಲ್ಲಿ ಮತ್ತು ಆತ್ಮವೃತ್ತ. ಮುಂಬೈಯಿಂದ ಏಡನದ ವರೆಗೆ ಬರೀ ಕಡಲು. ಏಡನ್ನದಿಂದ ಜಿಬ್ರಾಲ್ಟರದ ವರೆಗೆ ಕಡಲ ತೀರ, ಹೀಗೆ ಪ್ರವಾಸದಲ್ಲಿಯೂ ಒಂದು ಬಗೆಯ ಭಾಗ ಕಾಂಬುದು. ಈ ಗೀತಗಳು ಹೇಗಿವೆಯೆಂಬುದನ್ನು ಒಂದೇ ಮಾತಿನಲ್ಲಿ ಹೇಳ ಬಹುದು: ನವರಂಗ ಭಂಗಿಯಲಿ ಕುಣಿವ ಮುನ್ನೀರಂತೆ ಹೃದಯ ತೂಗಾಡು ತಿರಲು ಸಪ್ತಸಾಗರದೊಳಗೆ ಸುಪ್ತವಾಗಿರುವಂಥ ಮುಗಿಲನ್ನೆ ನೋಡುತಿರಲು ಮುಗಿಲಿನಿಂಗಿತವ ತಿಳಿಸುವ ಮುನ್ನೀರ ಸಂಗೀತವಿಹುದು. ಈ ವಾರಿಧಿಯ ಗೀತಗಳಲ್ಲಿ, ಸುಮಾರು ೬೦ ಗೀತಗಳಿವೆ. "ಸ್ವಚ್ಛಂದ ಛಂದದಲ್ಲಿ ಜಲಕ್ರೀಡಾ ವೃತ್ತದಲ್ಲಿ ಅನುದಿನವು ತೆರೆಗಳು ಹಿಡಿದ ತಾಳ ಲಯದಲ್ಲಿ ಗೀತವ ನೊರೆದೆ ನೆಂದು ಗೀಳ್ ಮಾಡಬೇಡ. ಸಮುದ್ರವ ಸೆರೆಹಿಡಿದವರುಂಟೆ ? ಉಕ್ಕಲಿ— ಚಿಮ್ಮಲಿ ಸಮುದ್ರ ಸ್ವಾತಂತ್ರ್ಯ. ಹೊಸದೆಲ್ಲ ಹುಟ್ಟಿ ಬರಲಿ—ಹೃದಯವಾಳ ದಲ್ಲಿ." ಎಂದು ಮೊದಲೇ ಹೇಳಿದ್ದಾರೆ ಆದ್ದರಿಂದ ಇಲ್ಲಿಯ ಗೀತಗಳ ಅಂದ-ಛಂದಗಳು ಸಮುದ್ರದ ಸ್ವಾತಂತ್ರ್ಯದ ಪಡಿನೆಳಲಾಗಿದೆ. ತರಂಗಗಳಿಂದ ಪ್ರಭಾವಿತವಾಗಿದೆ. ಅದಕ್ಕೆ "ಬೇಡಯ್ಯ ಬಂಧಗಳ ಬಂದಿವಾಸ. ಬರೆದದ್ದೇ ಬಂಧುರವಾಗಬಹುದು. ಸಮುದ್ರವಾಗು ಕವಿಯೆ ! ಕವಿಗಳ ಸಮುದ್ರ-ಗುಪ್ತನಾಗು" ಎಂದು ಬಗೆಯ ಬಗೆಯನ್ನು ತೋರಿದ್ದಾರೆ.

ಸಮುದ್ರವು 'ಮಾನವನಂತೆ ಸಮಾಧಾನ ರಹಿತ; ದೇವನಂತೆ ಶಾಂತಿ ಪೂರಿತ'ವಾಗಿದೆ ತೆರೆಗಳ ತುಮುಲ ಯುದ್ಧವನೋಡಿ "ಇದೇ ನಿತ್ಯ ಜೀವನ, ಇದೇ ಚಿರಂತನ ತತ್ವ. ಇದೇ ಸನಾತನ ಧರ್ಮ. ತೆರೆಯಾಗಿ ಒತ್ತರಿಸುವೆನು, ನೊರೆಯಾಗಿ ತತ್ತರಿಸುವೆನು, ನೀರಾಗಿ ಭಿತ್ತರಿಸುವೆನು, ನಿನ್ನ ಕೃಪೆಯೊಂದಿರಲಿ, ಸಮುದ್ರನಾಥ !" ಎಂದು ಉಸುರಿದ್ದಾರೆ.

"ನಿನ್ನ ಏಕಾಂತದಲ್ಲಿ ಮೊಳಗುವುದನಂತದ ಗುಟ್ಟು
ನಿನ್ನ ಕರುಣೆಯಿರಲು—ಒಂಟಿಗನೆ ನಾನು ಸಮುದ್ರನಾಥ."

ಎಂದು ಕೆಳೆ ಸಾಧಿಸಿಕೊಂಡಿದ್ದಾರೆ. ಗೆಳೆಯನಾದ ಸಮುದ್ರನಾಥನು ಉದಾರನು,. "ಬೆಳಗ ಬಂದವನನ್ನು ಮುಳುಗಿಸುವುದಿಲ್ಲ. ದೇವನಂತೆ ಅನಾಸಕ್ತ ನಿವ; ಇವನಲ್ಲದೆ ಚಿರಂಜೀವಿಯಾರು ?" ಎಂದು ಬಣ್ಣಿಸಿದ್ದಾರೆ.

ಕಡಲ ತೀರದ ವಿಭಾಗದಲ್ಲಿ ಏಡನ್ ಮೊದಲು. ಅಲ್ಲಿ "ಹಸಿರ ಹೆಸರಿಲ್ಲ ತೊಯ್ದು ಮಳಲಿಲ್ಲ. ನೀರಡಿಸಿ ಚಾಚಿದ ನಾಲಗೆಯಿದು–ಏಡನ್ನು. ಇಲ್ಲಿಯ ಕೆರೆ ಬರಿದು, ಬಾವಿ ಬರಿದು, ಹೊಂಡ ತೆರವು. ಸಾವಿರ ವರುಷ ಸೂರ್ಯನಡಿಗೆ ನೀರಡಿಸಿ ಮಲಗಿತ್ತು. ಆಗ ತಣಿಸಿದನದರವನು ಪೈಗಂಬರನು ಹುಟ್ಟಿ, ಅರಬು ಹಿಂಗಿತ್ತು." ಹೀಗೆ ಏಡನ್ನನು ಬಣ್ಣಿಸಿ ಆ ಕಡೆಗೆ ನೋಡಿದರೆ ಆಯೆಂದು ನಿಂತಿರುವ ಆಫ್ರಿಕೆ ಕಾಂಬುದು. ಅದು ಕರಿಯ ಖಂಡ. ಕತ್ತಲಿನ ಪ್ರದೇಶ. ಅದಕ್ಕೆ ಹೇಳುವರು: "ಹೆದರ ಬೇಡ ಆಫ್ರಿಕವೆ. ಬರಬಹುದು ನಿನ್ನ ಹುಣ್ಣಿಮೆ ನಾಳೆ. ಕದಲಬಹುದು ನಿನ್ನ ಕತ್ತಲೆ."

"ಕಚ್ಚಲು ಬರುವ ಹಾವಿನಂತೆ ರೊಚ್ಚಿನಿಂದ ನಾಲಗೆಯೆತ್ತಿ ದಂಡೆಗುಂಟ ಕುನಸಿಟ್ಟು ನಡೆಯುತಿದೆ ನೋಡು" ಎಂದು ಸುಯೇಜ ಕಾಲುವೆಯನ್ನು ಬಣ್ಣಿಸಿದ್ದಾರೆ. ದಾರಿಯಲ್ಲಿಯ ಕ್ರೀಟ, ಸ್ತ್ರಾಂಬೋಲಿಗಳನ್ನು ವರ್ಣಿಸುತ್ತ ನೇಪಲ್ಸದಲ್ಲಿಯ ಮೂರ್ತಿ ಸಂಗ್ರಹಾಲಯವನ್ನು ಚಿತ್ರಿಸುವರು. ಇದು ನಾಲ್ಕು ಷಟ್ಪದಿಗಳು ಇದ್ದ ಗೀತ. ಪರಭಾಷೆಯ ಶಬ್ದಗಳು ಕೂಡ ಈ ಕಾವ್ಯ ಛಂದದಲ್ಲಿ ಬಲು ಚೆಂದವಾಗಿ ಬಂದಿವೆ. ಓದುವಾಗ ಮೋಜೆನ್ನಿಸುತ್ತದೆ.

....ಮುನ್ನಡೆದು ಬಂದೆ ಸೀಜರರ ಸಾಲನು ದಾಟಿ
ಘನ್ನಮಹಿಮರ ನೋಡಿ ಸಾಕ್ರೇಟೀಸನಿಗೆರಗಿ ವಂದಿಸಿ ಯುರೀಪಿಡಿಸನ
....ಸಾಗಿದೆನು ಜುಪಿಟರನ ಇಂದ್ರ ಪದವಿಯ ಕಂಡು
ತೂಗಿದೆನು ಹರುಷದಲಿ ಹರ್ಕ್ಯುಲೀಸಿನ ಬಲಕೆ ಮರ್ಕ್ಯುರಿಯ
ಬುದ್ಧಿಬಲಕೆ
....ಆದಿಶೇಷನ ಭಾರವನೆ ಹೊತ್ತ ಅಟ್ಲಾಸ
ನೋಡಿ ತನ್ನನು ತನ್ನೊಳಿಸೆದಿರುವೆ ನಾರಸಿಸಸ
ಹಾಡುವರು ಕೊಳಲೂದಿ ಯಕ್ಷ ಕಿನ್ನರರಂತೆ ಮತ್ತೆ ಸ್ಯಾಟಿರ–ಫಾನರು."

ಒಂದೇ ವಾಕ್ಯದಲ್ಲಿ ಪಾಶ್ಚಾತ್ಯರ ನಾಟ್ಯಶಾಲೆಯಲ್ಲಿಯ ರೀತಿ–ನೀತಿಯನ್ನು ಹೇಳಿಬಿಡುವರು : ಗಂಡಾದರೆ ಸಾಕು–ಗಂಡನವ. ಹೆಣ್ಣಾದರೆ ಸಾಕು–ಹೆಂಡತಿಯವಳು. ಇಲ್ಲಿಗಳಿದಿದೆ ಸಂಕರ. ಇದಕಿಂತ ಭಯಂಕರವೇನು?

ಹಡಗವನ್ನು ನೌಕಾ ರಾವಣನೆಂದಿದ್ದಾರೆ. ಇದು ಹಡಗದಲ್ಲಿ ಸಂಕ್ಷಿಪ್ತ ಬ್ರಹ್ಮಾಂಡವಿದು. "ಇಲ್ಲಿಯ ನ್ಯಾಯ" ಎಂಬ ಕವಿತೆಯಲ್ಲಿ ಬಂದ ಮಾತುಗಳು ಒಳ್ಳೇ ಪರಿಣಾಮಕಾರಿಯಾಗಿರುವುವು.

"ಇವ ಬಿಳಿಯ ಅವ ಕರಿಯ, ಇವ ಸೇವ್ಯ ಅವ ಸೇವಕ.
ಇವ ತ್ರಾಣ—ಅವ ನಿತ್ರಾಣ. ಇಂತಿದೆ ಇಲ್ಲಿಯ ನ್ಯಾಯ.
ಅನ್ಯಾಯವೆಂದು ಮುಗಿಯುವುದು; ವಿವೇಕವೆಂದು ಚಿಗಿಯುವುದು."
....ದಾಸ್ಯದಲ್ಲಿ ಸಿಲುಕಿ ಗಾಸಿಗೊಂಡ ತಾಯ್ನಾಡೆ ಭಾರತದೇವಿ
ಈ ಬವಣೆ ಮಾತ್ರ ನಿನಗೆ ಬರದಿರಲಿ.
ಪಾರತಂತ್ರ್ಯದಲ್ಲಿ ಬಿದ್ದು ಪಾರಗಾಣದಿರಬಹುದು—
ಬಡತನ—ಒಡಕುತನ—ಎಲ್ಲ ಇರಬಹುದು.
ಆದರೆ ಈ ಮದೋನ್ಮತ್ತತೆಯ ಅಂಧತೆ ಬೇಡ.
ಒಡೆತನದ ನರಕಬೇಡ; ಬಂಡಿವಾಳದ ಬಂಡು ಬೇಡ.
ಅದು ಪರಮ ದಾಸ್ಯ; ದುಃಸಹ ನರಕ.

'ಬ್ರಿಟನ್ನಿನ ದ್ವೀಪದಲ್ಲಿ' ಭಾಗದಲ್ಲಿಯ ಅನೇಕ ಕವನಗಳು ಅಲ್ಲಿಯ ಕೆಲ ಸ್ಥಳ ವರ್ಣನೆ ಮಾಡುತ್ತಿವೆ. 'ಹಿಮಾಗಮನ' ಮತ್ತು 'ಶಿಲಾಕನ್ಯೆ' ಇವು ಬಹು ಸುಂದರವಾದವುಗಳು. ವರ್ಣನೆಯ ವೈಖರಿಯನ್ನು ಇವುಗಳಲ್ಲಿ ನೋಡುವ ಹಾಗಿದೆ. ಭಾರತ ಮತ್ತು ಇಂಗ್ಲಂಡಗಳ ಬಗ್ಗೆ ಇರುವ ವಿಚಿತ್ರ ಸಂಗತಿಗಳನ್ನು ಹೇಳುವುದು 'ವಿಚಿತ್ರ' ಎಂಬ ಕವನ. ಭಾರತದಲ್ಲಿ ಒಂದು ಕಾಲದಲ್ಲಿ ಸಂಪತ್ತು ಇತ್ತು; ಇಂದು ಕೂಳಿಲ್ಲ ನೀರಿಲ್ಲ. ಇಂಗ್ಲಂಡದಲ್ಲಿ ತಿನ್ನಲು ಬರಿ ಗಡ್ಡೆಗೆಣಸು ಇತ್ತು. ಇಂದು ಸೃಷ್ಟಿಯ ಕೊಳ್ಳುವ ಕುಬೇರರು ಇದ್ದಾರೆ. ಭಾರತದಲ್ಲಿ ಕೋಟಿಗಟ್ಟಲೆ ಜನ ಇದ್ದರೂ ಅವರು ದಾಸಾನುದಾಸರು. ಬ್ರಿಟನ್ನಿನಲ್ಲಿ ಕೆಲ ಲಕ್ಷ ಜನರು; ಆದರೆ ಅವರು ಸಾಮ್ರಾಟರು. ಭಾರತದಲ್ಲಿ ಇಲ್ಲದ್ದು ವಿಶ್ವದಲ್ಲಿಯೆ ಇಲ್ಲ. ಲಕ್ಷ್ಮಿ ಸರಸ್ವತಿಯ ತವರಮನೆ ಅದು. ಆದರೆ ವಿದ್ಯೆಗಾಗಿ ಇಂದು ಭಾರತೀಯರು ಬ್ರಿಟನ್ನಿಗೆ ಬರುವರು ಇದು ಪರಮ ವಿಚಿತ್ರ.

ಆತ್ಮವೃತ್ತ ಭಾಗದಲ್ಲಿಯ ಕವನಗಳು ಹೆಸರಿಗೆ ತಕ್ಕವಾಗಿದೆ. ನ್ಮಡಿಗೇಟ ಪಾರಿತೋಷಕ ಸಿಗಿದಿದ್ದ ಕಾಲಕ್ಕೆ ಬರೆದ ಕವನದಲ್ಲಿ. "ಜಲಧಿ

ಯಾಚಿ ಕರೆದು ತಂದ ದೈವ ಕೈಯ್ಯ ಬಿಟ್ಟಿತೆ" ಎಂದು ನಿರಾಶೆಯ ಧ್ವನಿ ಕಂಡರೆ, ಅರ್ಪಣದಲ್ಲಿ ದೈವಿಕ ಶಕ್ತಿಯಲ್ಲಿ ವಿಶ್ವಾಸ ಒಡಮೂಡಿದೆ.

"ಬದುಕಿಸಿದೆ ನೀನೆನ್ನ .... ನಿನ್ನ ಆಣತಿಯೆ ನನ್ನ ಜೀವಿತದ ಗುರಿಯೆ .... ನೀ ಕಾಣದಿರಲೇನು ? ಮನಗಂಡಿಹೆನು ನಿನ್ನ. ದನಿಯಾಲಿ ಸದೆ ನಿನ್ನ ಮನವ ತಿಳಿದೆ." ಎಂದು ಉಸುರಿದ್ದಾರೆ. ಇಂಗ್ಲಂಡದಲ್ಲಿದ್ದಾಗ ಪರೀಕ್ಷೆಯ ವೇಳೆಗೆ ಬೇನೆಗೆ ಸಿಲುಕಿ ಪಾರಾದ ಸಂದರ್ಭದಲ್ಲಿ ಬರೆದ ಕವನ ವಿದು. ಈ ಸಂಗ್ರಹದಲ್ಲಿ ಭಾವ ವೈವಿಧ್ಯ, ಬಂಧವೈವಿಧ್ಯಗಳು ಕಂಡು ಬರುವುವು.

೧೯೪೫ ರಲ್ಲಿ ಪ್ರಕಟವಾದ 'ತ್ರಿವಿಕ್ರಮರ ಆಕಾಶಗಂಗೆ" ಎಂಬುದು ಹೊಸ ಮಾದರಿಯ ಸಾಹಿತ್ಯವೆಂದು ಹೇಳಬೇಕು. ತನ್ನರಿವು ತಾನಾಗಿಯೆ ಕೊನರಿದ ಬಗೆಯನ್ನು ಚಿತ್ರಿಸುವ ಚಂಪೂ ಕಾವ್ಯ. ಇದರಲ್ಲಿ ಆತ್ಮವೃತ್ತದ ಭಾಗ ಬಹಳಿಷ್ಟಿದೆ. ಆದರಲ್ಲಿಯೂ ಪ್ರಜ್ಞಾವಿಕಾಸವು ಹೇಗಾಯಿತೆಂದು ಹೇಳುವ ಅನೇಕ ಘಟನೆ-ಸಂಗತಿಗಳ ಉಲ್ಲೇಖ ದೊರೆಯುತ್ತದೆ. ತ್ರಿವಿಕ್ರಮರು ಬರೆದು ವಿನಾಯಕರ ಕೈಗೆ ಕೊಟ್ಟ ಹಾಗೆ ಇದರ ಪರಿಚಯ ಮಾಡಿಕೊಡಲಾಗಿದೆ. "ಉಚಿತಕೆ ತಕ್ಕಷ್ಟು ಪೇಳ್ವೆನು; ಆಧ್ಯಾತ್ಮವೇ ನಿಚಿತಪ್ರಯೋಜನವೆನಗೆ.'' ಎಂಬ ರತ್ನಾಕರವರ್ಣಿಯ ವಾಕ್ಯವೇ ಇದರ ಗುರಿಯಾಗಿದೆ. ವಿನಾಯಕರ ಜೀವನದಲ್ಲಿ ಆದುದೆಲ್ಲವೂ ಇಲ್ಲಿ ಬಂದಿಲ್ಲ. ಇಲ್ಲಿ ಬಂದುದೆಲ್ಲವೂ ಹಾಗೆಯೆ ಆಗಿದೆಯೆಂದಲ್ಲ. ಇಷ್ಟು ತಿಳಿದು ಈ ಕಾವ್ಯ ಓದಿದರೆ, ಅರ್ಥ ಸರಿಯಾಗಿ ಆಗುವುದು.

"ಓರ್ವ ಜೀವಿಯು ಕಂಡ ಸತ್ಯದಲಿ ತುಂಬಿಹುದು
ಸಕಲ ವಿಶ್ವದ ಸತ್ಯ.... ಕಂಡಿರುವುದನು ನುಡಿವೆ.''

ಎಂದು ಸಂಕಲ್ಪ ಭಾಗದಲ್ಲಿ ಹೇಳಿದ್ದಾರೆ. "ನನ್ನ ಮನವು ಹಾತೊರೆಯುತಿದೆ ಸರಸತಿಯ ಕಾಂಬುದಕೆ."

'ಮರಣವಿತ್ತ ಬೆಳಕು' ಇದರಲ್ಲಿ ವಿನಾಯಕ ಬಾಲ್ಯದಲ್ಲಿ ಮತ್ತು ನಂತರ ಅವರು ಕಂಡ ಮರಣಗಳ ಬಗ್ಗೆ ಹೇಳಿಯದೆ.

"ಕಳೆದುಕೊಂಡನು ಮನವು ಮೆಚ್ಚಿದಾ ಸೋದರನ
....ಇದರಂತೆ ಸಾವಿನಲಿ ಸಂದಶ್ಕೈ ಪ್ರೀತಿಸುವನೇ ತಾಯಿಯ ತಂದ,
ಮತ್ತೆ ತಾಯಿಯ ತಾಯಿ....ಅಕ್ಕರದಿ ಬೆಳೆವ ಹಿರಿಯಕ್ಕನಿಗೆ
ಬಂದೊದಗಿತೆಂತಹ ಭೀಕರ ಮರಣ...."

ಮರಣದ ಸಂಗತಿಯ ಅರ್ಥವಾಗದ ಮೂಲಕ ತಳಮಳಗೊಂಡಿದ್ದರು ವಿನಾಯಕರು ಎಂಬುದನ್ನು ತಿಳಿದಿದ್ದೇವೆ. 'ಪೂಜಾರಿ' ಎಂಬ ಕಾವ್ಯ ಭಾಗವು ವಿನಾಯಕ ಜೀವನದಲ್ಲಿ ನಡೆದ ಘಟನೆ ಎಂಬುದು ಸ್ಪಷ್ಟವಾಗುವುದು. ಆಧ್ಯಾತ್ಮಿಕ ಜೀವನದ ನಾಂದಿ ದುರ್ಗಾದೇವತೆಯ ಗುಡಿಯಲ್ಲಿ ಪೂಜಾರಿಯ ಸನ್ನಿಧಾನದಲ್ಲಿ ಆಗಿರುವ ಸಂಗತಿಗೂ ಇಲ್ಲಿನ ವರ್ಣನೆಗೂ ಹೋಲುತ್ತದೆ. ಮುಂದೆ ಪ್ಲೇಟೋನಿಕ್ ಪ್ರೇಮದ ಮಾದರಿಯಲ್ಲಿ ಜೀವ ಕಸಿವಿಸಿಗೊಂಡು ಕಳೆದುಕೊಂಡುದನು ಹುಡುಕಬೇಕೆಂಬ ಹಾಗೆ ಅಲೆದ ಸನ್ನಿವೇಶಗಳು ಪ್ರೀತಿ ಪ್ರಕರಣದಲ್ಲಿ ಸಿಕ್ಕುವುವು. 'ಗೆಳೆತನದ ಗೆಲುವು' ಭಾಗದಲ್ಲಿ ಗೆಳೆತನದ ಬಗ್ಗೆ ಹೇಳಲಾಗಿದೆ. ಅಲ್ಲಿ ಬರುವ ರಾಮೂ ಅಭ್ಯಂಕರನೇ ಎಂದು ತಿಳಿಯುತ್ತದೆ. ಗೆಳೆಯರ ಬಗ್ಗೆ ಗೆಳೆತನದ ವ್ಯಾಪ್ತಿ-ಸಖ್ಯ ಯೋಗ ಇವುಗಳ ಮಾತು ಗುಂಪಿನ ಜೀವನದ ಬಗ್ಗೆ ಇರುವುದು ವ್ಯಕ್ತವಾಗುತ್ತದೆ. ಹೃತ್ಕಮಲ ಭಾಗದಲ್ಲಿ ಶ್ರೀ ಅರವಿಂದರ 'ದರ್ಶನ'ದ ಲಾಭವಾಗುವುದು. ಅವರಿಂದ ದಾರಿ ಸಿಚ್ಚಳವಾಗಿ 'ನಿರ್ಧಾರ'ಕ್ಕೆ ಬಂದಿತು. ಪ್ರಜ್ಞೆಯ ವಿಕಾಸವು ನಿಜವಾದ ಹಂತಕ್ಕೆ ಬಂದಿತೆಂಬುದಾಗಿ ತಿಳಿಸುವುದು ಈ ಆಕಾಶಗಂಗೆ. ಕತೆ ಹೇಳುವುದೇ ಅದರ ಮುಖ್ಯ ಗುರಿ. ಕತೆಯನ್ನು ಸರಳರಗಳೆ ಅಥವಾ ಹೊಸ ಛಂದದಲ್ಲಿ ಹೇಳುತ್ತ ನಡು ನಡುವೆ ಗದ್ಯದಲ್ಲಿಯೂ ಹೇಳಲಾಗಿದೆ. 'ಆಕಾಶಗಂಗೆ'ಯು ಆತ್ಮಚರಿತಾತ್ಮಕ ಒಲವುಗಳುಳ್ಳ ವಿನಾಯಕರ ಪ್ರಜ್ಞಾವಿಕಾಸದ ಪಡಿ ಪವರುಗಳನ್ನು ಸೂತ್ರರೂಪವಾಗಿ ದೂರದಿಂದ ಕಂಡ ಮೂರನೆಯವರು ಹೇಳಿದ ಹಾಗೆ ಹೇಳಿದ ವಿಶಿಷ್ಟ ಶೈಲಿಯ ಚಂಪೂ ಕಾವ್ಯ. ಆತ್ಮಿಕ ಅನುಭವಗಳ ಉದಯಾಭ್ಯುದಯಗಳನ್ನು ತಿಳಿಸಿ ಹೇಳುವ ಸ್ವಗತ ಕಾವ್ಯ.

ವಿನಾಯಕರ "ಅಭ್ಯುದಯ"ದ ಕಾಲ ೧೯೪೬. 'ಅಭ್ಯುದಯ'ದ ದರ್ಶನವೂ ಆದುದು ಅದೇ ಸಮಯಕ್ಕೆ. ನಮ್ಮ ಭಾಷೆಯಲ್ಲಿ ಸಾಹಿತ್ಯದಲ್ಲಿ ಕರೆಯಲ್ಪಡುವ ಪ್ರಗತಿ ಪರ ಸಾಹಿತ್ಯಕ್ಕೆ ಆಂಧ್ರ ಸಾಹಿತಿಗಳು 'ಅಭ್ಯುದಯ'

ಸಾಹಿತ್ಯವೆನ್ನುವರು. ವಿನಾಯಕರು ಹೈದರಾಬಾದಕ್ಕೆ ಹೋದನಂತರ ಅವರಿಗೆ 'ಅಭ್ಯುದಯ'ದ ದರ್ಶನವಾಯಿತು.

ಈ ಸಂಗ್ರಹದಲ್ಲಿ ಎರಡು ಭಾಗ. ಮೊದಲನೆಯದು 'ಅಭ್ಯುದಯ' ಸಾಹಿತ್ಯ ಪ್ರಕಾರದಲ್ಲಿ ಬರುವ ೧೨ ಕವನಗಳು. ಎರಡನೆಯದು ೭೧ ಕವನಗಳಿರುವ ಅಷ್ಟಷಟ್ಪದಿವಿಭಾಗ. ಅಷ್ಟ ಷಟ್ಪದಿ ಎಂದರೆ ಇಂಗ್ಲಿಶದಲ್ಲಿ ಕರೆಯುಲಾದ ಸೊನೆಟ (Sonnet). ಇದರ ಮುಖ್ಯ ಲಕ್ಷಣವೆಂದರೆ ಇದು ೧೪ ಸಾಲುಗಳ ಪದ್ಯ; ಇದು ಹದಿಮೂರನೆಯ ಶತಕದಿಂದೀಚೆ ಪ್ರಸಾರದಲ್ಲಿ ಬಂದುದೆಂದು ಹೇಳುತ್ತಾರೆ. ಇದರಲ್ಲಿ ಎರಡು ಭಾಗ. ಮೊದಲನೆಯದು ಎಂಟು ಸಾಲುಗಳದು; ಎರಡನೆಯದು ಆರು ಸಾಲುಗಳದು. ಈ ಕಾರಣದಿಂದ ಅದಕ್ಕೆ ನಮ್ಮಲ್ಲಿ ಅಷ್ಟ-ಷಟ್ಪದಿ, ಎಂದು ಕರೆದಿರಬೇಕು. ಹದಿನಾಲ್ಕು ಸಾಲುಗಳ ಮಿತಿಯಲ್ಲಿ ಈ ಎಂಟು-ಆರುಗಳ ವಿಭಾಗವೂ ನಿಶ್ಚಿತವಾದುದು. ಮೊದಲನೆಯ ಎಂಟು ಸಾಲುಗಳಲ್ಲಿ ವಿಷಯದ ಹಿನ್ನೆಲೆಯಂತೆ ವಿವೇಚನೆ; ಮುಂದಿನ ಆರು ಸಾಲುಗಳಲ್ಲಿ ವಿಷಯದ ಸಿದ್ಧಾಂತ ಮಂಡನೆ. ಒಂದು ಬಗೆಯ ಭೂಮಿತಿಯ ಲೆಕ್ಕದಂತೆ. ಈ ಎಂಟಾರು ಸಾಲುಗಲ್ಲಿ ಪ್ರಾಸ ವಿನ್ಯಾಸದ ಮೂಲಕ ಇನ್ನು ಒಂದೆರಡು ಭೇದಗಳನ್ನು ಕಲ್ಪಿಸಿ ಬೇರೆ ಬೇರೆ ಮಾದರಿಯ ಸೊನೆಟುಗಳೆಂದು ಹೇಳುತ್ತಾರೆ. ಎಂಟರಲ್ಲಿ ನಾಲ್ಕು ನಾಲ್ಕು, ಆರರಲ್ಲಿ ಮೂರು ಮೂರು ಇಲ್ಲವೆ ಎರಡರಂತೆ ಮೂರು; ಇಲ್ಲವೆ ನಾಲ್ಕು ಎರಡು ಹೀಗೆ ಸಾಲುಗಳಿಗೆ ಪ್ರಾಸ ವ್ಯವಸ್ಥೆಯು ಗುರುತು ತೋರಬಹುದು. ಕಿರಿದರೊಳ್ ಪಿರಿದು ಪೇಳ್ವ ಹವಣಿಕೆಯು ಈ ಪ್ರಕಾರದ ಪದ್ಯದ ಉದ್ದೇಶವಾಗಿರಬೇಕು. "ಏಕಾಗ್ರತೆ, ತೀವ್ರತೆ" ಇಲ್ಲಿ ಮುಖ್ಯ ಲಕ್ಷಣವೆಂದು ಈ ಸಂಗ್ರಹಕ್ಕೆ ಮುನ್ನುಡಿ ಬರೆದ ವಿ. ಸೀ. ಹೇಳಿದ್ದಾರೆ.

ಅಭ್ಯುದಯದ ಭಾಗದಲ್ಲಿ 'ಬಣ್ಣದ ಚಿಟ್ಟೆ' ಎಂಬ ಕವನದಲ್ಲಿ ನರನ ನರಕತನವನ್ನು ಮುರುಕತನವನ್ನು ತೋರಿದ್ದಾರೆ. ನರನು

"ಇಳೆಯೆಂಬ ನಂದನದಿ ಪುಂಡಾಟವಾಡುವನು.
ಹುಲಿಯುಬ್ಬರವು ನಿಲಲು ಇವನ ಹೊಲಿ.
ಸ್ವಾರ್ಥವಿದ್ದರೆ ಕೊಲುವ, ಸ್ವಾರ್ಥವಿಲ್ಲದೆ ಕೊಲುವ.

ಮೋಜಿಗೆನಲೊಮ್ಮೊಮ್ಮೆ ಬಂದು ಕೊಲುವ
ಮತ್ತೆ ದೇವರ ದಿವ್ಯ ಸೃಷ್ಟಿಯಲ್ಲಿವ ಮೇಲು
ಕೋಡು ಮೂಡಿಹ ವಿವಗ: ಇವನೆ ಚೆಲುವ.

ಇವನು ಪಶುವಲ್ಲ ಮಾನವನೆಂದು ಮಾನ ಕೊಟ್ಟರೂ ತನ್ನ ಪಶುತವನ್ನು ಬಿಟ್ಟಿಲ್ಲ; ಗೆದ್ದಿಲ್ಲ. ಮಾನವನು ಮಾನವನಾಗಿಲ್ಲ; ಮಾನವಂತನಾಗಿಲ್ಲ ಎಂದು ಸಾರಿದ ಸಾಲುಗಳವು. 'ಬೇಡಿತಿ' ಎಂಬ ಕವನದಲ್ಲಿ ಅವಳ ಜೀವನವು ಎಷ್ಟು ಕಷ್ಟತರವಾದುದು ಎಂದು ತೋರಿ ಕರುಣೆ ಹುಟ್ಟಿಸುವದು. ತಲೆಯ ಮೇಲೆ ಕಟ್ಟಿಗೆ ಹೊರೆ ಹೊತ್ತ ಅವಳನ್ನು ಕಂಡು,

"ಹೆಣ್ಣೆ ಹೊರೆಯಾಗಿಹುದೋ
ಹೊರೆಯೆ ಹೆಣ್ಣಾಗಿಹುದೊ....

ಎಂದು ನುಡಿದಿದ್ದಾರೆ.

'ಬೆಡಗಿ' ಎಂಬುದು ಬೆಡಗಿನ ಹೆಂಗಸಿನ ಬಗ್ಗೆ ಇದೆ. "ಸುಡು ನಿನ್ನ ಸಿಂಗರವ, ನಿನ್ನ ಸೊಗವ; ಬಿಡು ನಿನ್ನ ಬೆಡಗ, ಹಾಳಾಗಿಸಿತು ಜಗವ." ನೂರು ಹೆಣ್ಣಿನ ಹೆಣ್ಣುತನವೆ ಹೋಗಿ, ಕೂಲಿ ಹೆಣ್ಣಾಗಿ ಬರಿಯಂತ್ರವಾಗಿ ಸಾಯುತಿರೆ ಕೂಡಿಟ್ಟ ಹಣದ ಗಂಟು, ಅದರಿಂದ ನಿನ್ನ ಚೆಲುವಿಕೆಗೆ ಉಂಟು, ನರಕದಾ ಮುಗಿಲಿಂದ ಬಂದ ಮಿಂಚು ನಿನ್ನ ಕೆಂದುಟಿಯ ನಗೆ ರಕ್ಕಸರ ಹೊಂಚು.

ದೇವ ಕೊಟ್ಟಿಹ ಚೆಲುವದೊಂದೆ ಸಾಕು.
ಚೆಲು ಗುಲಾಬಿಗೆ ಬಣ್ಣವೆಯದೇಕೆ ಬೇಕು ?

ಸುಡು ನಿನ್ನ ಸಿಂಗರವ. ನಿನ್ನ ಬೆಡಗ ಹಾಳಾಗಿಸಿತು ಜಗವ" ಎಂದು ಬಿನ್ನಣಗಿತ್ತಿಯಾದ ಬೆಡಗಿಯನ್ನುದ್ದೇಶಮಾಡಿ ಆಡಿದ ಮಾತಿನಲ್ಲಿ ಎಷ್ಟು ಅರ್ಥ ತುಂಬಿದೆ!

೭೧ ಅಷ್ಟ ಷಟ್ಪದಿಗಳು. ಇಪ್ಪೊಂದು ಒಂದೆಡೆಯಲ್ಲಿ—ಒಬ್ಬ ಕವಿಯಿಂದ ಬಂದುದು ಒಂದು ವಿಶೇಷವೇ ಸೈ. ಮೊದಲನೆಯ ಹನ್ನೊಂದು ಅಷ್ಟ ಷಟ್ಪದಿಗಳಲ್ಲಿ ವ್ಯಕ್ತಿ ಚಿತ್ರಗಳೂ ಕಲ್ಪನಾ ಚಿತ್ರಗಳೂ ಇವೆ. ವಿಶ್ವಾಮಿತ್ರ, ದಮಯಂತಿ, ಮಾಸತಿ, ಶೆಲ್ಲಿ, ತ್ಯಾವಣನಾಯಕ. ಇವು ವಿನಾಯಕರ

ದೃಷ್ಟಿಯನ್ನು ತೋರುವ ವ್ಯಕ್ತಿ ಚಿತ್ರಗಳು. ೧೨ ರಿಂದ ೨೩ ರ ವರೆಗೆ ನಿಸರ್ಗದಲ್ಲಿಯ ಅಂದ ಚೆಂದಗಳನ್ನು ತೋರುವಂತಹವು. ಮುಂಗಾರು, ಮರುಭೂಮಿ, ರಾಜಹಂಸ, ಬೋಳಗುಮ್ಮಟ, ಶಿಲಾವೃಕ್ಷ, ಇವುಗಳಲ್ಲಿ ವರ್ಣನೆಯು ಯಥಾವತ್ತಾಗಿದೆ. ಮುಂದಿನ ಹತ್ತು ಮಾನವ ಸ್ವಭಾವದ ವರ್ಣನಾಪರ ಕೃತಿಗಳಾಗಿವೆ. ವಿಡಂಬನದ ಮಾದರಿಯಲ್ಲಿ ಕೆಲವು, ಭಾವನಾ ಲಹರಿಗಳಲ್ಲಿ ಕೆಲವು.

ಒಂದೊಂದು ಅಷ್ಟಷಟ್ಪದಿ ಒಂದು ಘಟಕ. ಅದನ್ನು ಅದರ ವಸ್ತು-ವಿವೇಚನೆಯ ರೀತಿ, ಮನಸಿನ ಮೇಲೆ ಆಗುವ ಪರಿಣಾಮಗಳಿಂದ ಅಳೆಯಯಬೇಕು. ಹೀಗೆ ಜಾತ್ರೆಯಲ್ಲಿ ಗುರುತಿಸುವ ಹಾಗೆ ಅವುಗಳನ್ನು ನೋಡಬಾರದು. ಬಿಡಿ ಬಿಡಿಯಾಗಿ ಅದರ ಸೌಂದರ್ಯವನ್ನು ಓದಿಯೇ ತಿಳಿದುಕೊಳ್ಳಬೇಕು. ಆದರೆ ಒಟ್ಟಿನಲ್ಲಿ ಅವುಗಳ ರೀತಿಯಲ್ಲಿ ಕಟ್ಟು ನಿಟ್ಟು ಇದೆ; ವರ್ಣನೆಯಲ್ಲಿ ವೈಖರಿಯಿದೆ; ಭಾವಗಳ ಸ್ಪಷ್ಟತೆ ಇದೆ, ಎಂದು ಹೇಳಿದರೆ ಅವುಗಳ ಬಾಹ್ಯಪರಿಚಯ ಮಾಡಿಕೊಟ್ಟಂತಾಗುವುದು. ಅಂತರಂಗದ ತಿರುಳನ್ನು ಅವುಗಳನ್ನು ಓದಿಯೆ ತಿಳಿಯಬೇಕು.

'ನವ್ಯ ಕವಿತೆಗಳು' ಈ ಸಂಗ್ರಹವು ೧೯೫೦ ರಲ್ಲಿ ಪ್ರಕಟವಾಯಿತು. ನವ್ಯ ಕವಿತೆಗಳೆಂದರೆ ಹೊಸ ಮಾದರಿಯ ಕವಿತೆಗಳು ಎಂದು ಅರ್ಥ. ಇದರಲ್ಲಿ ಎಲ್ಲವೂ ಹೊಸತು. ಭಾಷೆ, ಬಂಧ, ವಿವೇಚನೆಯ ರೀತಿ. ಇದು ಹಳೆಯ ಸಂಪ್ರದಾಯವಂತರಿಗೆ ದಿಗಿಲುಗೊಳಿಸುವ ಕವನ ರಚನೆ. ಈ ಬಗ್ಗೆ ವಿನಾಯಕರು ಒಂದು ಅಷ್ಟಷಟ್ಪದಿಯಲ್ಲಿ ಹೀಗೆ ಹೇಳಿದ್ದಾರೆ.

.... .... .... .... ....ಚರ್ಚೆ ?
ಆಧುನಿಕ ಕವಿತೆಯ ಕುರಿತೊ ? .... .... .... ....
ಸಾಲೆ ಹುಡುಗರ ಕೇಕೆ ಎನ್ನುವಿರಾ ಈ ಕವಿತೆ? ಇಲ್ಲಿ ನೋಡಿರಿ ಬರ್ಚಿ
ಹೃದಯದಲಿ ನಾಟುವುದೋ ? ಅಂತೆಯೆ ಕವಿತೆಯು. ಮೂರ್ಛೆ
ಹೋಗುವಿರಾ ಪ್ರಾಸರಹಿತವೆಂದು ? ಅದು ಏಕೆ ?
.... .... ಆ ಷಟ್ ಶಾಸ್ತ್ರದ ಆವರಣವು ಬೇಕೆ ಕವಿತೆಗೆ ?

ಹೀಗೆ ಹಾಕಿದ ಪ್ರಶ್ನೆಗಳಿಂದ ಅವುಗಳ ಹಿಂದೆ ಅಡಗಿದ ಉತ್ತರವು ದೊರೆವುದು. ಹೃದಯದಲ್ಲಿ ನಾಟುವುದರಿಂದ ನವ್ಯ ಕವಿತೆಯು ಕಾವ್ಯವು. ಪ್ರಾಸ

ರಹಿತವಾದುದು ಪದ್ಯವಲ್ಲವೆಂದೆನ್ನುವುದು ಸರಿಯಲ್ಲ. ಷಟ್ ಶಾಸ್ತ್ರದ ಆವರಣವು ಕವಿತೆಗೆ ಬೇಕಿಲ್ಲ. ನವ್ಯ ಕವಿತೆಯೆಂದರೆ ಅದೊಂದು ಕಾವ್ಯ ಪ್ರಬಂಧ. ಬಂಧವಿದೆ; ಆದರೆ ಹಿಂದೆ ಬಳಸಿದಂತಹ ಬಂಧವಲ್ಲ. ಉತ್ತಮ ಗದ್ಯವೂ ಕಾವ್ಯವೆಂದಾಗಿರುವಾಗ ನವ್ಯಕಾವ್ಯವು ಏಕಾಗಬಾರದು. ಈ ಕಾವ್ಯ ಪ್ರಕಾರಕ್ಕೆ ವಸ್ತುಗಳ ಆಯ್ಕೆಯಲ್ಲಿ ಮಡಿವಂತಿಕೆ ಇಲ್ಲ. ಕವಿಗೆ ಬೇಕಾದ ವಸ್ತುವು ಸ್ಫೂರ್ತಿ ಒದಗಿಸಬಹುದು. ಹೃದಯವಂತಿಕೆ ಇದ್ದರೆ ಅಲ್ಲಿ ಜೀವ-ಜಡ, ಚೇತನ-ಅಚೇತನ ಎಂಬ ಭೇದಕ್ಕೆ ಎಡೆಯಿಲ್ಲ. ಜಡದಲ್ಲಿ ಜೀವವನ್ನು ಕಾಣುವ ರೀತಿ ಕವಿಯದು ಎಂದ ಮೇಲೆ ಕಾವ್ಯವನ್ನು ಅದು ಉಂಟು ಮಾಡುವ ಪಾರಿಣಾಮಿಕ ಫಲದಿಂದ ಅಳೆಯಬೇಕು. ಕೇವಲ ಹೊರ ರೂಪ ದಿಂದಲ್ಲ. ಗಂಡಸಿನ ರೂಪವ ಧರಿಸಿದರೆ ಗಂಡಾಗಬಹುದೆ? ಎಂಬುದೇ ಇಲ್ಲಿ ಕಾಣುವ ಮಾತು. ಭಾವಕ್ಕೆ ತಕ್ಕ, ವಿಚಾರಕ್ಕೆ ತಕ್ಕ ಭಾಷೆ ಬಂದಾಗ ಅಲ್ಲಿಯೂ ನುಡಿ ಪಾವಿತ್ರ್ಯದ ಹೆಸರಿನಲ್ಲಿ ಮಡಿವಂತಿಕೆ ಬರಬೇಕಿಲ್ಲ. ಹೇಳಿ ದುದು ತಿಳಿವುದೋ? ಮನದಟ್ಟಾಗುವುದೊ? ಸಾಕು. ಉಳಿದ ಮಾತು ವ್ಯರ್ಥ.

ಇನ್ನೊಂದು ಮಾತು. ಬೇರೆ ಬೇರೆ ರಾಗಗಳಿಗೆ, ಬೇರೆ ಬೇರೆ ಭಾವಾ ವೇಗಗಳಿಗೆ ತಕ್ಕಂತೆ ಬೇರೆ ಬೇರೆ ತಾಳಲಯಗಳು ಸಂಗೀತ ಶಾಸ್ತ್ರದಲ್ಲಿ ಇಲ್ಲವೆ? ಅದರಂತೆ ಬೇರೆ ಬೇರೆ ಭಾವ-ವಿಚಾರಗಳಿಗೆ ಮಾನವನ ಪ್ರತಿಕ್ರಿಯೆ ಯಾದರೂ ಬೇರೆಬೇರೆಯಾಗಿ ಆಗುತ್ತದೆ. ಆದ್ದರಿಂದ ನವ್ಯಕವಿತೆಗಳನ್ನು ಓದಿಸಿ–ಇಲ್ಲವೆ ಗಟ್ಟಿಯಾಗಿ ಅರ್ಥವತ್ತಾಗಿ ಓದಿಕೊಂಡಾಗ ಅದು ಹಳೆಯ ಛಂದ-ಬಂಧವನ್ನೇಕೆ ಉಪಯೋಗಿಸಿಕೊಳ್ಳಲಿಲ್ಲ. ಕಡಿಕಡಿದಾದ, ಹಿರಿದು ಕಿರಿದಾದ ಸಾಲುಗಳುಳ್ಳ ಕವಿತೆಯೇಕಾಯಿತು ಎಂಬುದರ ಅರ್ಥವಾದೀತು. ತಿಳಿಯದ್ದಕ್ಕೆ ಇಲ್ಲವೆ ತಿಳಿದುಕೊಳ್ಳಲಾರದ್ದಕ್ಕೆ ಮೂಗು ಮುರಿದರೆ ಯಾರ ದೋಷವದು?

ಈ 'ನವ್ಯ ಕವಿತೆಗಳು' ಸಂಕಲನದಲ್ಲಿ 'ಹೆಮ್ಮೂಗು' ಎಂಬುದು ಮೊದಲನೆಯ ಕವಿತೆ. ದೊಡ್ಡ ಮೂಗು. ಗಾತ್ರದಿಂದಲ್ಲ. ಸೊಕ್ಕಿನಿಂದ ಅದು ದೊಡ್ಡದಾದ ಮೂಗು. ಮೂಗು ವಾಸನೆ ನೋಡುವುದಕ್ಕೆ ಹೊರತು ಸೊಕ್ಕು ತೋರುವುದಕ್ಕಾಗಿ ಅಲ್ಲ. ಅದಕ್ಕೆ ಅಲ್ಲಿ ಹೀಗೆ ಮಾತುಗಳು ಬಂದವು.

"ನಿನ್ನ ಮೂಗೇ ಮೇಲಾಗಲಿ ! ಜಗತ್ತೆಲ್ಲ ಮುಳುಗಿದರೂ
ನಿನ್ನ ಮೂಗೊಂದು ತೊಳಗಿರಲಿ. ನಿನ್ನ ಮೂಗಿಗೆಂದು
ತೋಟಗಳಲ್ಲಿ ಹೂಗಳು ಮಾಳಿಯ ರಕ್ತಾಣುಗಳಂತೆ ಸುರಿದಿವೆ."

ಸಮಾಜದಲ್ಲಿ ಕೆಲ ಜನರು ದುಡಿವವರು ಕೆಲ ಜನರು ಅದರ ಫಲ ಪಡೆವವರು. ಈ ಸ್ಥಿತಿಯು ಇಂದಿನ ಬಾಳಿನ ಎರಕ ತೋರುತ್ತಿದ್ದುದು ವಿಚಾರವಂತರಿಗೆ ಅಸಹನೀಯುವಾಗಿದೆ. ಸಮಾಜದ ಸುಖ ಜೀವನಕ್ಕಾಗಿ ಎಲ್ಲರೂ ದುಡಿಯ ಬೇಕೆನ್ನುವ ಭಾವ ಮೂಡತೊಡಗಿದ್ದುದರಿಂದ ದುಡ್ಡಿದ್ದವನೇ ದೊಡ್ಡಪ್ಪ ಎಂಬುದು ಶೋಷಣೆಯ ಲಕ್ಷಣ; ಕೆಳಗಿನವರ ರಕ್ತ ಶೋಷಣೆಯ ಲಕ್ಷಣ. ಇದರ ನಿವಾರಣೆಯಾಗಬೇಕು, ಎಂಬುದು ಈಗಿನ ಧ್ವನಿ. 'ತೋಳಪ್ಪ' ಎಂಬ ಕವಿತೆಯು ಇದೇ ವಿಚಾರವನ್ನು ಮುಂದುವರೆಸುವುದು.

"ಸಾಲವನು ಮತ್ತಾರಿಗೇನೋ ಕಟ್ಟಿ ನೀ ನಿರುಂಬಳನಿರುವಿ.
....ಗುರುವಾರ ಗುರು ಭಜನೆ; ಶುಕ್ರವಾರಕೆ ಪೂಜೆ.
ಶನಿವಾರ ಯಾವನಿಗೊ ಬಂದಿವಾಸ. ರವಿವಾರ 'ಉಪವಾಸ'
ಸೋಮವಾರಕೆ ಖೂನು, ಧರ್ಮದೊಡಲನೆ ವ್ಯಾಪಿಸಿತ್ತು ಮೋಸ.
....ಕ್ರಿಮಿರಾಶಿಯಲ್ಲೊಂದು ಕ್ರಿಮಿ, ನಿನಗೆ ಭ್ರಮೆಯಿಹುದು.
ನೀನೆ ಲಕ್ಷ್ಮೀ ಪುತ್ರ, ಪಾರ್ವತಿಯ ಸೂನು.
....ಒಳ್ಳಿತನವೊಂದು ತೆರೆ, ಸಂಪ್ರದಾಯವು ನೀತಿ
ಧರ್ಮವಿನ್ನೊಂದು ಅನುಕೂಲ ಸೋಗು."

ಜಗತ್ತೇ ಒಂದು ರುಗ್ಣಾಲಯವಾಗಿದೆ. ಒಂದೊಂದು ಜೀವವು ಒಂದೊಂದು ಆದರ್ಶ ಕಾಣುತ್ತಿದೆ; ಅಹಮುಹಮಿಕೆಯ ಸೂಕ್ಷ್ಮ ರೋಗ ಹಿಡಿದಿದೆ, ದೇಶಕ್ಕೆ ಎಂದು 'ಕ್ಲೋರೋ ಫಾರ್ಮ' ಕವಿತೆಯಲ್ಲಿ ಹೇಳಿದ್ದಾರೆ. 'ಇಲ್ಲ' ಎಂಬ ಕವಿತೆ ಇದ್ದುದನ್ನು ತೋರಿ ಕಣ್ಣು ತೆರೆಯಿಸುವುದು. ತೋಟವನು ಅರಳಿಸಿ "ಅಲ್ಲಿ ನೀರಂತೆ ಹಣಿಸಿದ ಮಾಳಿಯ ರಕ್ತವನ್ನು ನೋಡುವ ಕಣ್ಣೇ ಇಲ್ಲ. ಹಾರಾಡುವ ವಿಮಾನವನ್ನು ರಚಿಸಲು ಹೋಗಿ ಕುರುಡಾದವರ ಕ್ರಂದನ ಕೇಳುವ ಕಿವಿಯೇ ಇಲ್ಲ." ಹಡಗದ "ಎಂಜಿನ್ ಕೋಣೆಗಳಲ್ಲಿ

ನೌಕಾಯಂತ್ರದ ಬಳಿ ಬೇದು ಬೂದಿಯಾಗುತ್ತಿರುವ ಪೇದೆಯನ್ನೆತ್ತಿ ತಬ್ಬುವ ಕೈಯೇ ಇಲ್ಲ." ಭಂಗಿಯು "ಇಂಥ ಹೇಸಿ ಕೈಯಲ್ಲಿಯೂ ಉಳಿಸಿ ಕೊಂಡ ಶೀಲದ ನರುಗಂಪನ್ನು ಮೂಸಿ ನೋಡುವ ಮೂಗೇ ಇಲ್ಲ." "ಅನ್ಯರ ಮನೆ ಮನೆಗಳ ಕಹಿಯನ್ನು ಸಹಾನುಭೂತಿಯಿಂದ ರುಚಿ ನೋಡುವ ಜಿಹ್ವೆಯೇ ಇಲ್ಲ.''

ಈ ಪ್ರಪಂಚ ಹೀಗಾಗಲು ಕಾರಣವೇನು ? ಪ್ರಪಂಚದಲ್ಲಿ ಸಾತ್ವಿಕ ಮನೋಭಾವವುಳ್ಳ ಜನ ಹುಟ್ಟುತ್ತಿಲ್ಲ. ಭೂಮಿ ತಾಯಿ ಅಂಥ ಮಕ್ಕಳನ್ನು ಪಡೆಯಬೇಕೆಂದು ಬಯಸುವಳೇನೋ ನಿಜ. ಆದರೆ ಹುಟ್ಟುವರೆಲ್ಲ ಹಿಟ್ಲರ್-ಸ್ಟಾಲಿನ್ ಮಾದರಿಯವರು.

" ಒಂದೊಂದು ನಾಗರಿಕತೆಯ ಯುಗ. ಒಂದೊಂದು ಗರ್ಭ ಧಾರಣ
ಆದರೆ ಜನ್ಮವಾಗುವ ಮೊದಲೇ ಗರ್ಭಸ್ರಾವ. ಅಕಾಲ ಪಿಂಡವು
ಒಮ್ಮೆ ಅಸ್ಪಷ್ಟ ಸಂತತಿ, ಒಮ್ಮೆ ರಾಕ್ಷಸ, ಒಮ್ಮೆ ಕಣ್ಣು ನಡುನೆತ್ತಿ
ಗೇರಿದ ಪಿಶಾಚಿ.

....ಯಾವ ಅದೊಂದು ಉಳಿಯುವದೆಂದು (ಭೂಮಿ ತಾಯಿ)
ಹೀಗೆ ಹಲವಳಿಯಲು ಹಿಂದೆ ಮುಂದೆ ನೋಡಳು.''

ಎಂದ ' ಹಲವಳಿ ' ಕವಿತೆಯಲ್ಲಿ ಕಂಗೆಟ್ಟಂತಹ ಮಾತುಗಳು ಬಂದಿವೆ.

' ಮೊದಲು ನೋಡಿದ ಕೋಣೆ ' ಎಂಬ ಕವಿತೆಯಲ್ಲಿ ಪುನರ್ಜನ್ಮದ ಬಗ್ಗೆ ಸೂಚಿಸುವ ಮಾತುಗಳು ಬರುವುವು. ಈ ಕೋಣೆಯನ್ನು ಹಿಂದೆ ಎಂದೋ ಕಂಡಿದ್ದೇನೆ. 'ಇದೇ ಮೊದಲಲ್ಲ. ಇದಕೂ ಮೊದಲು ಕಂಡೆ, ದೇವರಾಣೆ. ಹೊಕ್ಕನೆನಿತೋ ಸಲ, ಮರಳಿದೆನೆನಿತೋ! ಇಲ್ಲವು ಪರಿಮಿತಿಯು.

....ಕಾಣದ ತಾಣವ ಕಂಡಂತೆಸಗಿತು ಆತ್ಮನ ವರ ದೃಷ್ಟಿ.
ತೆರೆಯಲು ತ್ರಿಕಾಲ ಒಂದೇ ಕಾಲ; ಆತ್ಮೀಯವು ಸೃಷ್ಟಿ.'

ಎಂದು ತಮ್ಮ ಪ್ರಶ್ನೆಗೆ ತಾವೇ ಉತ್ತರ ಕೊಟ್ಟುಕೊಂಡಿದ್ದಾರೆ. ಸಂಸ್ಕೃತಿ ಒಂದು ಪ್ರವಾಹ. ಅದರಲ್ಲಿ ಪ್ರತ್ಯೇಕತೆಯಿಲ್ಲ. ಹಿಂದೆ ಇದ್ದುದು ಇಂದಿದ್ದು ಮುಂದೆಯೂ ಸಾಗುವುದು. ಈ ಪ್ರವಾಹದಲ್ಲಿ ನಿಂತ ಯಾರಿಗೂ ಯಾವುದೂ ಹೊಸದಲ್ಲವೆಂಬ ಆತ್ಮೀಯತೆ ಉಂಟಾಗುವುದು.

'ಮನ್ವಂತರ' ಎಂಬ ಕವಿತೆಯು ಹೊಸ ಮನ್ವಂತರದ ಬಗ್ಗೆ ಹೇಳುವುದು. ಸಮತಾವಾದ–ಸಾಮ್ಯವಾದ–ಸಂಘವಾದಗಳೆಂಬ ಹೆಸರಿನಲ್ಲಿ ಕಂಡು ಬರುವ ಸಮಾಜ ರಚನೆಯೆ ಹೊಸ ಮನ್ವಂತರ. ಇದು ಜ್ವಾಲೆಯಾಗಿ ಬಂತು, ಎಂದು ವಿನಾಯಕರು ಸಾರಿದ್ದಾರೆ ಅದು ನಿಜ. ಕ್ರಾಂತಿಯ ಕಹಳೆ ಊದುತ್ತ ಬರುತ್ತಿದೆ; ಬಂದಿದೆ. ಕಣ್ಣು ಕೆಂಪಾಗಿ ಬಂದ ಮನ್ವಂತರವಿದು.

'ಪ್ರಳಯ ಕಾಲದಾ ಗಾಳಿ ಬೀಸಿ ಇಳಿಯಾಯ್ತು ಯುದ್ಧ ಶಾಲೆ,
ಬಂತು ಬಂತು ಜ್ವಾಲೆ; ಅಂತೆ ಚೀನ, ತಿಬೇಟು ವಿಯಟ್‌ನಾವ್
ಮಂಚೂರಿಯ ಕೋರಿಯ ತೋರಿರುವುವು ದಾರಿಯ !
ನೆಕ್ಕಿ ನೆತ್ತರನೆ ನುಗಿಲಿನೆತ್ತರವನಲ್ಲಗಳೆವ ಜ್ವಾಲೆ.
....ಎಲ್ಲಿರುವನು ದೇವ ಅನ್ನಮಯದ ಅಡಿಂದು ಅರಚುತಿದೆ:
ಇಲ್ಲವದಕೆ ಹಸಿರು,
ಮನೋಮಯದ ಕಾಡಾನೆ ಧೀಂಕಿಟ್ಟು ಹಾಳುಗೆಡವುತಿಹುದು
ಬಿದ್ದು ಎಡುವುತಿಹುದು....
ಅಳಿದು ಸಾಮ್ರಾಜ್ಯ, ಕೊಳೆತು ಸ್ವಾರಾಜ್ಯ, ಇನ್ನಾವುದು ಭೋಜ್ಯ
ಎಲ್ಲವಿಹುದು ತ್ಯಾಜ್ಯ. ಹೋದ ಋತ್ವಿಜ
ಕಳೆದ ಕ್ಷತ್ರಿಯ ವಿಗತ ಪ್ರಾಣ ವೈಶ್ಯ, ಎಲ್ಲೆಡೆ ನೈರಾಶ್ಯ.
ಅಂತೆ ಬಂತಿದೋ ಮಹಾಜ್ವಾಲೆಯಿದು: ಬಂದ ತಾಳು ಶೂದ್ರ'
ಎನಿತಿದವನ ರೌದ್ರ! ಸರ್ವರ ಸುಖ ಸ್ವಾತಂತ್ರ್ಯವ ಬಯಸಿ
ಸರ್ವರ ಬಂಧಿಸುವ. ಏನಾ ಮಬ್ಬು ಏನದು ಕೊಬ್ಬು, ಆ ರಿಂಗಣ
ಗುಣಿತ.
ಆ ಶೋಣಿತ ಭಣಿತ! ಮೇಲೆ ಕೆಳಗೆಂದು ಹೊರಗೆ–ಒಳಗೆಂದು
ತಾರತಮ್ಯದಿಂದ
ಬಾಳಿದಂಥ ಮಾನವನೇ! ಕಣ್ದೆರೆ! ಭೋಗಿಸು ಇದರಂದ.
....ಸ್ವಾತಂತ್ರ್ಯದ ದಿಗ್‌ಬಂಧನದ ದೊಳಗೆ ಅರಳಿದೆ ಸಂಯಮವು
....ಕಾರ್ಮಿಕನೊಂದಾಗಿಸಿದೀ ಲೋಕದಿ ಸ್ವಧರ್ಮವು ಗೆಲಲು
ಜನವೇ ದೈವ. ಸಮಾಜ ರಚನೆ ಅಹುದು ಬರಿ ನಿಮಿತ್ತ.
....ಒಂದೇ ಕುಲವು, ಒಂದೆ ಸಮಾಜ ಒಂದನಂತ ಗುರಿಯು

ಹಿಗ್ಗಲದರ ಸಿರಿಯು !
ಕಾರ್ಮಿಕ ತಂದ ವಿಶಾಲತೆ ಪಡೆದಿರೆ ಎತ್ತರ-ಆಳುವನು
ವ್ಯಕ್ತಿಮತ್ತೆ ತನ್ನೊಳಗೇ ಪಡೆದು ಸುಂದರ ಮೇಳವನು.
ಮಾನವ ನಲಿಯುವನಾದಿ ಶಕ್ತಿಯೂ ಕುವರನಾಗಿ ಅಂದು,
ಅನಾದ್ಯನಂತ ಅಬಾಧಿತ ಪ್ರಭೆಗೆ ಉಘೋ ಉಘೋ ಎಂದು.
ಇದೇ ಹೊಸ ಮನ್ವಂತರ. ಜ್ವಾಲೆಯಾಗಿ ಬಂದಿದೆ. ಹಿಂದಿನದನು ನುಂಗುತಿದೆ ಇದೇ ಜೀವನದ ವಿಸ್ತಾರ. ಅದೇ ಹಿಗ್ಗು.

'ಹಿಗ್ಗು' ಎಂಬ ಕವನ ಸಂಗ್ರಹವೂ ೧೯೫೦ರಲ್ಲಿಯು ಪ್ರಕಟವಾಯಿತು. ಇದು ವಿನಾಯಕರ ಜೀವನದ ಹಿಗ್ಗು—ವಿಸ್ತಾರಗಳನ್ನು ತೋರುವುದು. "ಹಿಗ್ಗು ವಿಕಾಸ, ವಿಸ್ತಾರ. ವಿಸ್ತಾರವೇ ಆನಂದ. ಹಿಗ್ಗಿದವ ಹಿರಿಯನಾಗುತ್ತಾನೆ. ಕುಗ್ಗಿದವ ಕಿರಿಯನಾಗುತ್ತಾನೆ. ಸೊಕ್ಕಿದವ ಅಸುರನಾಗುತ್ತಾನೆ. ....ವಿಸ್ತೃತ ಪ್ರಜ್ಞೆಯೆಂದರೇ ಹಿಗ್ಗು. ಜಿಜ್ಞಾಸುವು ಹಿಗ್ಗಿನ ದಾರಿಯಲ್ಲಿಯ ಸಾಧಕ. ಹಿಗ್ಗಿನ ಮೊಗ್ಗೆಯೇ ಜ್ಞಾನಿ. ಹಿಗ್ಗಿನ ಸುಗ್ಗಿಯೇ ದೇವರು. ಹಿಗ್ಗಿನ ದಾರಿಯಲ್ಲಿ ಬರೆದ ಕವನಗಳಿವು." ಎಂದು ಈ ಪುಸ್ತಕದ ಮುನ್ನುಡಿಯಲ್ಲಿ ವಿನಾಯಕರು ಹೇಳಿದ್ದಾರೆ ಈ ಕವನಗಳಲ್ಲಿ ನಿಜವಾಗಿಯೂ ಹೊಸ ಹುಮ್ಮಸ ಚಿಮ್ಮುತ್ತಿದೆ. ವಿನಾಯಕರು ಹಿಗ್ಗಿ ಹಿರಿಯರಾಗಿದ್ದಾರೆಂದು ಒಂದೊಂದು ಕವಿತೆಯೂ ಸಾರಿ ಹೇಳಿ ಸಾಕ್ಷಿ ನುಡಿಯುತ್ತಿವೆ.

ಈ ಸಂಕಲನದಲ್ಲಿ ಮುವ್ವತ್ತು ಮೂರು ಕವನಗಳಿವೆ. ಇವುಗಳ ರಚನೆಯ ತಾರೀಖನ್ನು ಕೊಟ್ಟಿದ್ದರೆ, ವಿನಾಯಕರ ಪ್ರಜ್ಞಾವಿಕಾಸದ ಎಳೆಯನ್ನು ಪ್ರಗತಿಯನ್ನು ಕಂಡುಕೊಳ್ಳಬಹುದಾಗಿತ್ತು. ಮೊದಲು—ಕೊನೆಗೆ ವೀಸನಗರವೆಂಬ ಕವನಗಳು ಇವೆ. ಇವೆಲ್ಲವೂ ವೀಸನಗರದ ಜೀವನದಲ್ಲಿ ಬರೆದವುಗಳೆಂದು ತಿಳಿಯಬಹುದೇನೋ !

ವೀಸನಗರಕ್ಕೆ ಬರುವ ಮೊದಲು ವಿನಾಯಕರ ಜೀವನದಲ್ಲಿ ಅಲೆಯಾಡಿ ತಳಮಳ ಅನುಭವಿಸಿದ್ದರು. ಆ ತಪದ ಫಲವಾಗಿ ವೀಸನಗರಕ್ಕೆ ಬಂದರು. ಇಲ್ಲಿನ ಕವಿತೆಗಳಲ್ಲಿ ದೇವನಲ್ಲಿ ಭಕ್ತಿ, ಅವನ ಕರುಣೆಯೆ ದಾರಿದೀಪ, ಎಂಬ ಭಾವಗಳು ಸ್ಪಷ್ಟವಾಗುವುವು. 'ವೀಸನಗರ' ಎಂಬ ಮೊದಲ ಕವಿತೆಯಲ್ಲಿ ಹೀಗೆ ಬಂದಿದೆ :

" ವೀಸನಗರಕ್ಕೆಂದು ಕೈಯ ಬೀಸುತ ಬಂದೆ.
ಬಾಯೆಂದು ಕರೆದಿಹುದು ದೈವವಿಲ್ಲಿ.
....ಓ ಪ್ರಭೋ ! ನನ್ನಿಂದ ನಿನ್ನ ಪೂಜೆಯು ಸಾಗಿ
ನಿಂತ ನೆಲಕೊಂದಿನಿಸು ಸೇವೆ ಸಂದು
ತಾಯ್ನೆಲದ ಹೆಸರ ಸೊಬಗದು ಕುಂದದಂದದಲಿ
ಅನುರೂಪಿಸೆನ್ನ ಜೀವಿತವನಿಂದು.
....ತಪ್ಪಡಿಯನಿಡೆ ನಿನ್ನ ಮಗುವು ತಪ್ಪುವುದೆಂದು
ತಪ್ಪುಗಳ ತಿದ್ದು—ಜೀವಿತವ ತೀಡು."

ಈ ಅನನ್ಯ ಭಾವವು ಹೊಸ ದೃಷ್ಟಿಯನ್ನು ಒಳಗಿನ ದನಿಯನ್ನು ತೋರುವುದು. ಪ್ರಪಂಚವೊಂದು ' ವಿಷ-ಅಮೃತಗಳ ಸಮ್ಮಿಲನದ ಭೂಮಿ.

" ಅಲ್ಲಿ ವಿಷ, ಇಲ್ಲಿ ವಿಷ, ಎಲ್ಲೆಡೆಗೂ ಆಮಿಷ; ರಾಗದ್ವೇಷ ಕಿಲ್ಮಿಷ.
ಪೃಥ್ವಿಗೆ ನಂಜೇರಿದಂತೆ, ಮನುಕುಲ ಸಿಡಿಲ್ ನುಂಗಿದಂತೆ
ಹೃದಯದಲ್ಲಿ ತಳಮಳ; ಉದರದಲ್ಲಿ ಮಳಮಳ.
....ಬರುವ ಅಮೃತಕಾಗಿ ಕಾದು ಪೃಥ್ವಿ ನಂಜು ನುಂಗುತಿಹಳು
ಹೊಸ ಹೊಂಚಿನ ಬರವನೆಣಿಸಿ ಮುಳ್ಳಮೇಲೆ ತಂಗುತಿಹುಳು.
ನಮ್ಮ ಧ್ಯಾನ, ಅವಳ ಪ್ರಾಣ ಗೆಯ್ದ ಕೃತಿ, ನವೀನ ಸ್ಮೃತಿ.
ಅಗ್ನಿಕುಂಡವಿದೋ ! ಇದರಲಿ ತಾಳು ಬಾಳು ಜೀವವೆ !
ಬೆಂದು ನೊಂದು ಚಿನ್ನವಾಗು, ಘನ್ನವಾಗು ಭಾವವೆ ! "

ಎಂದು ಒಂದು ಬಗೆಯಿಂದ ನುಡಿದರೆ ' ದೇವಕಂಠ 'ದಲ್ಲಿ ಇನ್ನೊಂದು ಬಗೆ. " ನನ್ನೊಳಗೆ ಎಲ್ಲಿಯೋ ಯಾವ ಕೋಶದಲೇನೋ, ಮೌನ ವೇದನೆಯಿಂದ ಬಾಯಾರಿ ಬಳಲಿಹುದು ಹಿಂಗಲಾರದ ಹಿರಿ ಪಿಪಾಸೆಗತಿ ಒಣಗಿಹುದು ಒಳಗೊಳಗೆ ದೇವಕಂಠ " ಪ್ರತಿಜ್ಞೆ ಪೂರೈಸಲಿಲ್ಲವಲ್ಲ ಎಂಬ ಪ್ರಜ್ಞೆ ಮೂಡಿದೆ ವಿನಾಯಕರಿಗೆ. ಅದಕಾಗಿ ಮುಂದೆ ಈ ನುಡಿ ಸಾಕ್ಷಿಯಾಗಿದೆ : " ಸಕಲ ವೇದಾಂತಗಳ ಪುಣ್ಯೋದಕವ ತಂದು ತೀರ್ಥಗೆಯ್ಯುವೆನೆಂದೆ. ಪಡುವಣದ ವಿಜ್ಞಾನದರ್ಶವನೆ ತಂದಿತ್ತು ವಿರಸವಳಿಸುವೆನೆಂದೆ.

....ಅಶ್ವಿನಿ ಕುಮಾರರೇ ಈ ವ್ಯಾಧಿ ' ನಿಮಗರಿದು. ಚಂದ್ರಮೌಳಿಯೆ '
ಯಾವ ರಸಗಂಗೆಯೆಂಬುದನು ವ್ಯೋಮಕೇಶನು ಬಲ್ಲೆ ನೀ ಮಾತ್ರ.

ಮೋಹಿನಿಯೆ ! ನೀ ಬಲ್ಲೆ ಅಮೃತವೆಲ್ಲಿ ! ಅದನು ನೀವ್ ತರುವತನಕ.
ಈ ವ್ಯಾಧಿಯನು ಹೊತ್ತು ಅಂಡಲೆಯುವೆನು ನಿತ್ಯ ನಾನು
ದುರ್ದೈವಿಯೊಲು ನಾಡಿನಲಿ—ಕಾಡಿನಲ್ಲಿ."

ಈ ಮಾತುಗಳು ಮನದ ಉಮ್ಮಳವನ್ನು ಸ್ಪಷ್ಟಪಡಿಸುವುದಿಲ್ಲವೆ ? ಅದರ ಬಗ್ಗೆ ಇಲ್ಲಿ ಉತ್ತರವಿದೆ. ' ಆನಂದಮಯ 'ದಲ್ಲಿ.

" ಎಂದಿಗೆ ಎಂದಿಗೆ ತವ ಪರಿವರ್ತನ ಓ ಮನೋಮಯ ?
ಎಂದಿಗೆ ಎಂದಿಗೆ ನಿನ್ನವತರಣ ಓ ಆನಂದಮಯ !
ಒಳಗಿವೆ ಸತ್ ಶಕ್ತಿಯ ಮಹಲುಗಳು ನರಳ್ವದೇಕೆ ಇಲ್ಲಿ ?
ಮಹಡಿಯ ಮೇಲಿನ ಮಹಡಿಯನೇರು ಇಣಿಕಿ ನೋಡು ಅಲ್ಲಿ."

ಅದೇ ಭಾವವನ್ನು ಮುಂದರಿಸಲಾಗಿದೆ ' ನಿನ್ನನೆಂತು ' ಕವಿತೆಯಲ್ಲಿ.

"ನಿನ್ನನೆಂತು ಬಳಿ ಸಾರ್ವುದೆಂಬುದು ತಿಳಿಸು ಪರಾಶಕ್ತಿ! "

ಎಂದು ಕೇಳಿ ಅದುವರೆಗೆ ಮಾಡಿದುದನ್ನು ನಿವೇದಿಸಲಾಗಿದೆ. ಅದುವರೆಗಿನದು ಸರಿಯಾದ ದಾರಿಯಲ್ಲವೆಂಬ ಸೂಚನೆಯೂ ಮೂಡಿದೆ. 'ಚೈತ್ಯ ಪುರುಷ' ಕವಿತೆಯಲ್ಲಿಯ ಪ್ರಾರ್ಥನೆ ನೋಡುವಂತಿದೆ.

"ಏಳು ಚೇತನೆಗೊಂಡು ಏಳು ಓ ಚೈತ್ಯ ಪುರುಷ !
ನೀನೇಳದಲೆ ಎಲ್ಲಿ ಆ ಅನಂತದ ಹರುಷ
'ನಾನೆ'ಂಬ ಈ ಪ್ರಜ್ಞೆ ಕರ್ಮ ಚಕ್ರದ ಮೇಲೆ
ಕುಳಿತು ಮೇಲ್ ಕೆಳಗಾಗಿ ಸುತ್ತುತಿಹುದು.
ಅದರ ನಿಜ ನೇತಾರ ನೀನೆ ಎಂಬುದ ಮರೆತು
ಉಳಿದೆಲ್ಲ ಲೋಕಗಳ ಮುತ್ತುತಿಹುದು."

ಶ್ರೀ ಅರವಿಂದರ ತತ್ವಜ್ಞಾನವನ್ನು ಮೈಗೂಡಿಸಿಕೊಂಡ ವಿನಾಯಕರು 'ತಾಯಿ' ಎಂಬ ಕವನದಲ್ಲಿ ತಾಯಿ ತತ್ವದ ಮಾತು ಹೇಳಿದ್ದಾರೆ :

''ಯಾವ ಬ್ರಹ್ಮಾಂಡವಿದು ನನ್ನನೊಳಗೊಂಡಿಹುದೋ, ಅದೆ ನನ್ನ ತಾಯಿ ಬಸಿರು
ಊದಿ ಯಾ ತಂಗಾಳಿ ಅಂಗಕಂಗವಿಸುವುದೊ ಅದೆ ನನ್ನ ತಾಯ ಉಸಿರು.

‘ ಶಿಷ್ಯಸ್ತೇಹಂ’ ಎಂಬ ಕವನದಲ್ಲಿ ತಾಯಿಯು ದಾರಿ ತೋರುವಳು. ತಾವು ಅವರಂತೆ ನಡೆವವರು ಎಂಬ ಸೂಚನೆಯಿದೆ.

“ ಚೇತನವ ತುಂಬಿಸಲು ಯಾವ ತಾಣವದೇನು ?
ಮನದೊಳಗೆ ಬೆಳಗಿಸಲು ಯಾವ ದಿಶೆಯೇನು ?
....ನೆಲೆ ನಿಂತ ಪ್ರಾಂತವೆ ಪ್ರಭಾತಕ್ಕೆ ಪ್ರಾಂಗಣವು.
ತಾಯಿ ತೋರಿದ ನಾಡೆ ದಿವ್ಯ ವೇದಿಕೆಯು.
....ಕಣ್ಣ ಕಣಿಯಲ್ಲವಿದು, ತಾಯ ಪ್ರೇಮದ ಗಣಿಯು
ಕಾಕತಾಲಿಯಿದಲ್ಲ, ದಿವ್ಯ ಘಟನೆ.
....ಕೈಹಿಡಿದೆ ಭಯವೆಲ್ಲ ಹೋಯ್ತು ದಿಕ್ಕೆಟ್ಟೋಡಿ
ಅಡಿಯಿಟ್ಟೆ; ನನ್ನ ಮನೆ-ಮನವು ಪಾವನವು
ನಿನ್ನ ದರ್ಶನದಿಂದ ಕಣ್ಗೆ ಪಾರಣೆಯಾಯ್ತು.
ಹೃತ್‌ಪದ್ಮವರಳಿ ತುಂಬಿರಲಿ ಜೀವನವು.”

ಈ ಪ್ರಪಂಚವೆಂದರೆ ಒಂದು ಮುದ್ರಣಶಾಲೆ. ಅದು ‘ ಹಂಸ ಕಾವ್ಯದ ಅಚ್ಚುಕೂಟ’ ಅದರಲ್ಲಿ ಹೀಗಿದೆ :

“ ಲೋಕ ಮುದ್ರಣಶಾಲೆ ದೈವ ಜೋಡಣೆಗಾರ
ಮೊಳೆಯನೊಂದೊಂದಾಗಿ ಜೋಡಿಸುವನು;
ಮುದ್ರಣ ಮಹೇಂದ್ರನವ ಸುಕವೀಶ್ವರನ ಮೂಲ
ಹಂಸ ಪ್ರತಿ ಇದ್ದಂತೆ ಮೂಡಿಸುವನು.
“ ಸೃಷ್ಟಿ ಪುಟದೊಳು ಬಾಳ ಭವ್ಯ ಕವನವನಿದನು;
ತುದಿಮೊದಲೆ ಇಲ್ಲದ ಅನಂತ ಕೃತಿಯು
ವಿಶ್ವಚರಿತೆಯೆ ವಸ್ತು, ವಿಶ್ವಗತಿಯೇ ತಂತ್ರ
ವಿಶ್ವ ಹೃದಯವೆ ರೂಪ ಛಂದ ಶ್ರುತಿಯು.
“ ಮೊಳೆಯೊಲಿಹ ಮಾನವನೆ ಕಾಯ್ದುಕೊಳು ಮೊನೆಯನ್ನು
ಜ್ಯೋತಿ ರಸ ಲೇಪಿಸುವ ಸರತಿ ಬಂತೆ ?
ದೈವ ಲೇಪಿಸಿ, ನಿನ್ನ ನಚ್ಚಿಗಣಿಗೊಳಿಸಿರಲು
ಅಚ್ಚೊತ್ತು ತಿರುಳೆಲ್ಲ ಮೂಡುವಂತೆ.”

"ನನ್ನ ಕರ್ನಾಟಕ" ಎಂಬ ಕವನದಲ್ಲಿ ಪ್ರಾದೇಶಿಕವಾದ ಸ್ಥಿತಿಗತಿಯ ಬಗ್ಗೆ ಹೇಳಿದ್ದಾರೆ. ದ್ವೇಷ ವೈಷಮ್ಯ, ಹಗೆತನಗಳು

"ಮಲಿನವಾಗಿಸುತಿರಲು ನಾಡನ್ನ್, ಅನ್ಯಾಯ ಹಿಂಸೆ ಮತ್ಸರವು ಮದವು
ನಾನೆಂದೆ: ಓ ತಾಯೆ ಇನ್ನೆಂದು ನಿನ್ನ ಆ ದುರ್ಗಾವತಾರದೊದವು
....ನನ್ನ ತಾಯ್ನಾಡೆಂದು ಶರಣು ಬಂದೆನು ನಿನಗೆ
ನನ್ನ ಕರ್ನಾಟವೆಲ್ಲಿ ?

....ಗೊಮ್ಮಟೇಶ್ವರ-ಶಂಭು-ವಿಜಯ ವಿಠ್ಠಲರೆಲ್ಲ
ಒಂದಾಗಿ ಮೆರೆಯುವಲ್ಲಿ.
....ಪ್ರಮಥ ಶರಣರು ದಾಸ-ಭಕ್ತ-ತೀರ್ಥಂಕರರು
ನಿನ್ನ ನುಡಿಗಿತ್ತಿಹ ಸಮೃದ್ಧಿಯಲ್ಲಿ.
....ಇದೆ ನಿನ್ನ ಕರ್ನಾಟ-ಯುಗಯುಗದಿ ನೆರೆಯುವಾ
ಸಹೃದಯರ ಮೇಳವೇ ನಿನ್ನ ನಾಡು.
ಹಿಂದಿತ್ತು; ಇಂದಿಹುದು ಮುಂದಿಹುದನಂತದಾ
ಮೇರೆಯನು ಮೀರಿ, ನೋಡು.
—ಇವರೆ ಕರ್ನಾಟವೈ. ಉಳಿದೆಲ್ಲ ಕರ್ನಾಟ,—
ಕರ್ಣಾಟ! ಅಟಮಟದ ಮಾತು ಕೇಳು.
....ಹೊನ್ನ ಕನ್ನಡ ನಾಡಿನಲಿ ಸ್ವರ್ಣಯುಗವಿಳಿದು
ಮೊಳಗೀತು ವಿಜಯವಂದು
ಅದಕಾಗಿ ಬಾಳೋಣ, ಅದಕಾಗಿ ತಾಳೋಣ
ಮಂಥನದ ನಂಜನಿಂದು.

ಎಂದು ಆಸೆಯ ಅಂಕುರವನ್ನು ಇಂದಿನ ಕಹಿವಾತಾವರಣದ ಪರಿಹಾರಕ್ಕಾಗಿ ತೋರಿರುವರು.

'ಹಿಗ್ಗು' ಈ ಕವನ ಸಂಗ್ರಹದಲ್ಲಿ ಕವಿತೆಗಳಿಂದ ವಿನಾಯಕರ ಪ್ರಜ್ಞೆ ವಿಕಾಸವಾಗಿದೆ; ವಿಸ್ತಾರವಾಗಿದೆ. ಎಂದು ಧೈರ್ಯವಾಗಿ ಹೇಳಬಹುದು. ಎಳವೆಯಿಂದೊರೆದ ಕವನಗಳಲ್ಲಿ ಪ್ರಕಟಿತವಾದ ಭಾವ-ವಿಚಾರ-ಲಹರಿಗಳನ್ನು ಸಾಲಾಗಿರಿಸಿ ನೋಡಿದರೆ, ಪ್ರಜ್ಞೆ ಉತ್ತುಂಗವಾಗುತಿದೆ, ಉದಾತ್ತ

ವಾಗುತಿದೆ. ಕವಿಯು ದೇಶ-ಕಾಲ-ವಿಷಯಗಳ ಬಂಧನದಿಂದ ಮುಕ್ತನಾದವ ನೆಂದು ಹೇಳುವ ಅವಸ್ಥೆ ಬರತೊಡಗಿದೆ. ತಾನು, ತನ್ನವರು, ತನ್ನ ದೇಶ, ಇವುಗಳಿಗೆ ಮಿತವಾದ ಸ್ಥಾನವಿದೆ. ಇದೆಲ್ಲ 'ಸಂಕುಚಿತ' ಭಾವನೆಗಳನ್ನು ದಾಟಿ ಮಾನವೀಯ ಬೆಲೆಗಳತ್ತ ಸಾಗುವುದು ವಿಶ್ವಬಾಂಧವ್ಯದ ಕುರುಹು. ದೇವನಿಗೆ ಎಲ್ಲ ಮಾನವರು ಸಮಾನರು. ದೇವವಾಣಿಯು ಕವಿಹೃದಯ ದಿಂದ ಹೊರಹೊಮ್ಮುವುದು. ಭಾವ ಅವನದು ಭಾಷೆ ಕವಿಯದು. ಭಾಷೆ ಯಾವುದಾದರೇನು? ಭಾವ ಒಂದೆ ಇರುವಾಗ. ಅದು ಮಾನವನ ಕಲ್ಯಾಣ ಸಾಧಿಸಲೆಳಸುವಾಗ. ಆ ಸ್ಥಿತಿಯ ಅರಿವನ್ನು ತಂದುಕೊಳ್ಳುವುದು ಕವಿಯ ಸಾಧನೆ. ಈ ಕವನಸಂಗ್ರಹವನ್ನು ಓದುವಾಗ ವಿನಾಯಕರು ತಾವು ಕೇವಲ ನಿಮಿತ್ತ ಮಾತ್ರರು. ಆಡಿಸುವ ಕೈ, ನುಡಿಸುವ ಬಾಯಿ, ಅನ್ನಿಸುವ ಹೃದಯ ಇವು ದೇವನ-ವ್ಯಾಪಾರ. ತಾಯಿಯ ಆಶೀರ್ವಾದ ಎಂದು ತಿಳಿದು ನುಡಿದ ಹಾಗೆ ಅನ್ನಿಸುವುದು. ಈ ಬಗೆಯ ಎನಿಸಿಕೆ ಹಿಂದಿನ ಕವನಗಳನ್ನು ಓದು ವಾಗ ಸ್ಫುಟವಾದುದಿಲ್ಲ ಎಂದೂ ಅನ್ನಿಸುವುದು. ಇದರಿಂದ ಬಾಳು ದೇಗುಲ ವಾಗಿದೆ.

"ಬಾಳ ದೇಗುಲದಲ್ಲಿ" ಎಂಬದು ೧೯೫೪ರಲ್ಲಿ ಪ್ರಕಟವಾದುದು. ಇದರ ರಚನೆಯಾಗಿ ಅಷ್ಟೊತ್ತಿಗೆ ನಾಲ್ಕಾರು ವರುಷಗಳಾಗಿದ್ದುವು. ಇದೊಂದು ಮಹಾಕಾವ್ಯವೆಂದು ವಿನಾಯಕರೆ ಹೇಳಿದ್ದಾರೆ. ಈ ಮಹಾಕಾವ್ಯವು ಒಂದು ಕವನ ಮಾಲೆಯ ರೂಪದಲ್ಲಿ ಬಂದಿದೆ. ಮಹಾಕಾವ್ಯವೆಂದರೇನು ಎಂಬದು ತಿಳಿಯಬೇಕಾದ ವಿಷಯುವೇನೋ ಅಹುದು. ಆದರೆ "ಇಂದಿನ ಯುಗದಲ್ಲಿ ಮಹಾಕಾವ್ಯದ ಪರಂಪರೆಯು ಮೊದಲಿನ ಸ್ವರೂಪದಲ್ಲಿಯೆ ಉಳಿಯುವುದು ಕಠಿಣವಾಗುವುದು" ಎಂದು ವಿನಾಯಕರು ಹೇಳಿದುದರಲ್ಲಿ ಸತ್ಯವಿದೆ. ಪುರಾಣ-ಇತಿಹಾಸ ಕಾಲಗಳಲ್ಲಿಯ ಯುಗ-ಸನ್ನಿವೇಶಗಳನ್ನು ವಸ್ತು ಮಾಡಿಕೊಂಡ ಮಹಾಕಾವ್ಯಗಳಲ್ಲಿ ಅದ್ಭುತರಮ್ಯವಾದ ಸನ್ನಿವೇಶ-ವಿಚಾರ ಸನ್ನಿವೇಶಗಳಿರುತ್ತಿದ್ದವು. ಆದರೆ ತುದಿಯಿಂದ ತುದಿಗೆ ಒಳಗೆ ಹರಿಯುವ ಒಂದು ಸೂತ್ರತತ್ವವು ಕಂಡುಬರುವದು. ಈ ತತ್ವದ ಸುತ್ತಲೂ ಕಥಾನಕ ಹೆಣೆದು ಬಂದು ಸ್ಫೂರ್ತಿಕೊಡುವ ಹಾಗೆ ಆಗುವುದು. ನಮ್ಮ ದೇಶದಲ್ಲಿಯ ರಾಮಾಯಣ-ಮಹಾಭಾರತಗಳು ಬೇರೆ ಯಾವುದೇ ಹೆಸರಿನಿಂದ ಗುರುತಿ

ಸಲ್ಪಟ್ಟರೂ ಅವು ಮಹಾಕಾವ್ಯಗಳೆಂಬುದು ಸುಳ್ಳಲ್ಲ. ಶತಮಾನಗಳುರುಳಿದರೂ ಸಮಾಜದ ಕಟ್ಟುನಿಟ್ಟು ಬದಲಾದರೂ ಅವುಗಳ ವಿಷಯ ಹಳೆಯದೆನ್ನಿಸಿಲ್ಲ. ಅಲ್ಲಿನ ತತ್ವವು ಹಳೆಯದೆನ್ನಿಸಿಲ್ಲ. ಅಲ್ಲಿಯ ಸ್ಫೂರ್ತಿಸೆಲೆ ಬತ್ತಿಲ್ಲ. ಅದಕ್ಕೆ ಅವು ಮಹಾಕಾವ್ಯಗಳಾಗಿ ಸನಾತನವಾದ ಕೆಲ ತತ್ವಗಳನ್ನು ನಿರೂಪಿಸುವ ಶಕ್ತಿಯುಳ್ಳ ರಚನೆಗಳಾಗಿವೆ. "ಯತೋ ಧರ್ಮಃ ತತೋ ಜಯಃ ಎಂಬದು ಮಹಾಭಾರತದ ಸಾರ ಸ್ವಾಮಿನಿಷ್ಠೆ-ಬಂಧು ಪ್ರೇಮಗಳು ರಾಮಾಯಣದ ಸೂತ್ರ. ಧರ್ಮವನ್ನು-ಕಾಯದೆಯನ್ನು-ಅಕ್ಷರಶಃ ಪಾಲಿಸಬೇಕೋ ಸತ್ವತಃ ಪಾಲಿಸಬೇಕೋ ಎಂಬ ಪ್ರಶ್ನೆಯು ಸಾರ್ವಕಾಲಿಕ ಪ್ರಶ್ನೆ. ಅದನ್ನು ತಿಳಿಸಿ ಹೇಳುವುದು ಮಹಾಭಾರತ. ಮಾನವ ಪ್ರಪಂಚದಲ್ಲಿ ಸ್ವಾಮಿನಿಷ್ಠೆ – ಬಂಧುಪ್ರೇಮಗಳು ಇಲ್ಲದ ಯುಗಗಳಿಲ್ಲ. ಅಂತೆಯೆ ರಾಮಾಯಣವು ಶಾಶ್ವತ ತತ್ವಗಳನ್ನು ಹೇಳುವುದು. ಸ್ವಾಮಿ-ಎಂಬುದು ವ್ಯಕ್ತಿಯಾಗಬಹುದು; ರಾಷ್ಟ್ರದಂತಹ ಸಂಸ್ಥೆಯಾಗಬಹುದು. ಆದರೂ ನಿಷ್ಠೆಯಿಲ್ಲದೆ ಜಗತ್ತು ಬಾಳದು.

'ಬಾಳದೇಗುಲದಲ್ಲಿ' ಎಂಬದು ಆಧುನಿಕ ಮಹಾಕಾವ್ಯ. ಇಲ್ಲಿ ನಿತ್ಯವೂ ನೂತನವೂ ಸಾರ್ವಕಾಲಿಕವೂ ಆದ ಸಂಗತಿ-ವಿಚಾರಗಳು-ತತ್ವಗಳು ಅಡಕವಾಗಿವೆ. ಈ ಕವನ ಮಾಲೆಯಲ್ಲಿ ಕಂಡುಬರುವ ಏಕಸೂತ್ರತೆಯು 'ಬಾಳದೇಗುಲ' ಎಂಬ ಶಬ್ದದಲ್ಲಿಯೇ ಅಡಕವಾಗಿದೆ. ಇಲ್ಲಿ ಬಾಳನ್ನು- ಅಳೆದು ಅದೊಂದು ದೇಗುಲ ಎಂದು ಸಾರಲಾಗಿದೆ. ಈ ಬಾಳದೇಗುಲದಲ್ಲಿ ಬದಕುವವನಿಗೆ ಒಂದು ದೃಷ್ಟಿ ಬೇಕು. ಅದನ್ನು ಹೀಗೆ ಹೇಳಿದ್ದಾರೆ:

"ನಂಬದಿರು ಒಂದೆ ಧರ್ಮವ, ಒಂದೆ ಮಾರ್ಗವನು
ಇಂಬುಗೊಡದಿರು ಯಾವುದೊಂದು ಶ್ರುತಿಗೆ
ಕಂಬನಿಯ ಮಿಡಿಯದಿರು ನನ್ನದೇನಿಲ್ಲೆಂದು
ಇಂಥ ಹಮ್ಮೆಳೆಯುವುದು ನಿನ್ನ ಚ್ಯುತಿಗೆ.
ತೆಕ್ಕೆ ಬೀಳಾಗಸಕೆ, ಎಲ್ಲ ದರ್ಶನಗಳಿಗೆ
ನೆಲವೆ ಒರೆಗಲ್ಲೆಂಬ ಶ್ರದ್ಧೆ ಬರಲಿ!
ಬಯಲಾಗು! ಮೂಲೆ ಗುಂಪಾಗದಿರು; ಬಾನ್ನೆಲದ
ಹರಕೆಗಳು ಅಡಿ-ಮುಡಿಯ ಕಾಯುತಿರಲಿ."

ಈ ದೃಷ್ಟಿಯು ಇರದಿದ್ದರೆ ಇಂದಿನ ಬಾಳು ದೇಗುಲದಲ್ಲಿದ್ದವನು ಹಾಳು ದೇಗುಲದಲ್ಲಿದ್ದಂತೆಯಾಗುವುದು.

ಮಹಾಕಾವ್ಯ ಬರೆವವಗೆ ಬೆನ್ನೆಲಬಾಗಿ ದೈವಿಕ ಶಕ್ತಿ ಬೇಕಾಗುತ್ತದೆ. ಅದು ತಮಗೆ ಹೇಗೆ ಬಂದಿದೆ; ಹೇಗೆ ಉಳಿದಿದೆ, ಎಂಬದನ್ನು 'ಸಮರ್ಪಣೆ' ಎಂಬ ಕವನದಲ್ಲಿ ಹೇಳಿದ್ದಾರೆ ವಿನಾಯಕರು :

"ಸರಸತಿಯ ಕರುಣೆಯಿಂದೆನಗಿತ್ತ ಮುರಲಿಯನು ನುಡಿಸಿರಲು ರಾಗವಾಗಿ
ತುಳುಕಿರುವ ಗಾನದ ವಿತಾನದಲಿ ಮೂಡಿತ್ತು ನನ್ನಿರವು ಯೋಗವಾಗಿ
ವಿಶ್ವಮೋಹಿನಿ ತೋರಿದಂಥ ಮಾಣಿಕ ಮುತ್ತುಗಳನು ಪರಕಿಸಲು ನಡೆದು
ಒರೆದು ನೋಡಿದೆ ನನ್ನ ತಿಳಿವೆಂಬ ಚಿನ್ನವನ್ನೆಸೆಯಲದು ಕಾಂತಿವಡೆದು.
....ನಿನ್ನ ಆಶೀರ್ವಚನವಹುದೆನ್ನ ಜಿಂದಿಗೆಯು ಜೀವ ಬಿಂದಿಗೆಯ ತುಂಬಿ
ನಿಂದೆ ಶ್ರಮಣೋತ್ತಮನೆ! ಬಂದಃ ಶ್ರವಣದಂತೆ ನೀನೆನ್ನ ಕಣ್ಣಗೊಂಬಿ
....ನಾವು ಶುಚಿಯಾದಂತೆ ಮಾಯ ಮರೆಯಾಗುತ್ತ ತಾಯ ಮೊಗ
ತೋರುತಿಹುದು
....ಎಲ್ಲ ದರ್ಶನಗಳಾ ಸಾರಸಂಗ್ರಹವೆ ನಾನರ್ಚಿಸುವ ಸತ್ಯವೆಂದೆ."

ಈ ಬಾಳದೇಗುಲದಲ್ಲಿ ಒಬ್ಬೊಬ್ಬರಿಗೆ ಒಂದೊಂದು ದೃಷ್ಟಿ. ಸತಿ, ಪತಿ, ತಂದೆ, ತಾಯಿ, ಕನ್ನಡಿಗ, ಆರ್ಯಮಾತೆಯ ಪುತ್ರ, ಕ್ರಾಂತಿಕಾರ, ತ್ಯಾಗಿ, ದಾನಿ, ಸಮತಾವಾದಿ, ಕರ್ಮಯೋಗಿ, ಸನಾತನಿ, ವಿನೂತನಿ, ಸುಧಾರಕ, ರಸಿಕ, ಚೆಲುವಿನಾರಾಧಕ, ಕವಿ, ಆಟಗಾರ, ಪ್ರಮಥ, ಯೋಗಜೀವಿ, ಅನುಭಾವಿ, ದುಃಖಿ, ನಿರ್ಲಿಪ್ತ, ಭಕ್ತ ಇವರು ಲೋಕಾಲೋಕಗಳನ್ನು ಕುರಿತು ಚಿಂತಿಸಿದರು ತಮತಮಗೆ ಹೊಳೆದಂತೆ ಬಾಳಿನೊಳತಿರುಳನರಿತು.

ಬಾಳದೇಗುಲದಲ್ಲಿ ಜನ ಜೀತದಾಳೆಂದು ಬಂದು ನಿಂತಿಹುದು. ನೋಡಲು ಬರಿಯ ಎಲುಬಿನ ಹಂದರ. ಜೀವವಿಲ್ಲ; ಸತ್ವವಿಲ್ಲವೆಂಬಂತೆ. ಹಡೆದ ಮಾತಾಯಿಯನು ಕಾಂಬೆವೆಂದು ಬಂದ ಯಾತ್ರಿಕರಿವರು. ಇವರಲ್ಲಿ ಗುಂಪುಗಳು. ಮೊದಲನೆಯ ಗುಂಪಿನಲ್ಲಿ ಮಗು, ಕುಮಾರಿ, ಮದುವಣಿಗ, ವಿವಾಹಿತ, ಪತಿ, ಅನ್ಯಾನುರಕ್ತಪತಿ, ತಾಯಿ, ತಂದೆ. ಬಾಳದೇಗುಲದಲ್ಲಿ ಇವರು ಮೂಲವಾಗಿ ಕಾಂಬುವರು.

.... ಮಗು,

ಆಡು, ಒಳ್ಳೆಯಾಟವಾಡು, ಓಡು ದಿಕ್ಕುದಿಕ್ಕಿಗೆ ಓಡು
ಬಾಳಿನಾಳವನಳೆದು ನೋಡು ಒಂದೆ ಸಮನೆ ಕಂಡು.
....ತಿಳಿವನುಳಿಯೆ ಸಂಸಾರವು ನೀರಿಲ್ಲದ ಕಾಸಾರವು
....ಆ ತಿಳಿವಿನ ಅರುಣಾಂಕುರ ಮೊಳೆಯಲು ಬಾಳ್ವೆಯುಶಂಕರ
ಇಲ್ಲದಿರಲು ಬರಿಸಂಕರ. ಬಯಲಿನ ಹುಯಿಲ್, ಬಂಡು."

ಎಂದು ಮಗುವು ವಿಕಾಸವಾಗಬೇಕಾದ ಪರಿಯನ್ನು ತಿಳಿಸಿದ್ದಾರೆ.

ಸಮಾಜದಲ್ಲಿ ಸ್ತ್ರೀಯ ಸ್ಥಾನವಾವುದು ಎಂಬದನ್ನು ಹಿನ್ನೋಟ-ಮುನ್ನೋಟಗಳನ್ನು 'ಕುಮಾರಿ' ಪದ್ಯದಲ್ಲಿ ತೋರಿರುವರು.

"ಕೋತಿಯ ಕೈಗಿತ್ತ ಮಾಣಿಕಗಳ ಚಂಡಿನಂತೆ ಸ್ತ್ರೀಯು,
ನರವಾನರ ಹಾಳುಗೆಯ್ದು ಹೋಮಿಸಿರುವನು.
ನೃತ್ಯಾಂಗನೆ, ಶೂದ್ರಗೆಂದು, ದೇವದಾಸಿ ದ್ವಿಜನಿಗೆಂದು
ವಾರಾಂಗನೆ ಕ್ಷಾತ್ರಗೆಂದು ನಮ್ಮ ಖ್ಯಾತಿಯು
....ಹೆಣ್ಣು ಕಣ್ಣು ಮೂಗಿನಿಂದ ನೆಟ್ಟಗಿರಲು ನಾಡಿಗೆ
ಹುಟ್ಟಿ ಬೆಳೆದ ಮನೆಗೆ ಲೋಕಕೆಲ್ಲ ಮಾರಿಯಾಗುವಂತೆ
ಕಾಮಿಸಿದರು ಬಂದು ಕೊಳ್ಳಿಯಿಟ್ಟು ಬೀಡಿಗೆ.
....ಹೆಣ್ಣಿಗೊಂದು ಜೀವವಿಹುದನೆಲ್ಲ ಮರೆತು ಕಣ್ಣುಮುಚ್ಚಿ
ಕಾಮಿಸುವರು ನರರು ದೇಹಸಿರಿಯನೊಂದಪೇಕ್ಷಿಸಿ
....ಸೃಷ್ಟಿಕ್ರಮದಿ ಹೆಣ್ಣು-ಗಂಡು ಒಂದನೊಂದು ಪೂರ್ತಿಗೊಳಿಸಿ
ಬಾಳುತಿಹವು ಕತ್ತಲೆದೆಯ ಸೀಳಿ ಚರಾಚರವ ತುಂಬಿ
....ಇದ್ದ ಭೇದ ಕಳೆವುದೆಂತು. ಇರದಿಹುದನು ತರುವುದೆಂತು?
ಗಂಡು ಹೆಣ್ಣು ಬೇರೆಯಲ್ಲವೆನುವುದೆಂತು ?
ಅರ್ಧ ಪುರುಷನರ್ಧನಾರಿಯಾಗಿ ದೇವ ಮೂರ್ತಿಗೊಂಡ
ನೆಂದು ಕೇಳಿ ತಿಳಿದ ಲೋಕಕಿನ್ನು ಹೊಳೆಯಲಿ."

ತಾಯಿತನವೇ ದೊಡ್ಡದು ಎಂದು ಹೇಳುವಾಗ,

"ಸತಿಯಾದ ಮಾನಿಸಳು ಮಾತೆಯಾಗದೆ ನಿಲಲು
ಬಾಳುವೆಗೆ ಮುಕುಟವನು ತೊಡಿಸಿದಂತೆ."

ತಂದೆ ಮಕ್ಕಳಿಗೆ ಹೇಳಿದ ಮಾತುಗಳಿವು: ಪಾಲಕನು ನಾನು; ಬೆಳೆವವನು ನೀನು.

"ದೇವ ಪೂಜೆಯಲೆಂದು ತೇದ ಗಂಧದ ಕೊರಡು
ನಿನ್ನ ಕಾಪಿಡಲು ಸವೆಸಿದ್ದ ದೇಹ.
ನಿನ್ನ ಬೆಳೆಸಲು ಮುಂದೆ ಸಣ್ಣಗಾಗುವ ಜೀವ
ದಿವ್ಯ ನಂದಾದೀಪಕೆರೆದ ನೇಹ.
ಯಾವ ಋಣದಲಿ ನಾವು ನಿನ್ನನಿಡಬಯಸಿಲ್ಲ.
ನೀನು ಬೆಳೆವುದೆ ನಮ್ಮ ಕಣ್ಣ ಪ್ರೀತಿ
ನಿನ್ನ ಪಕ್ಕವು ಬಲಿತು ಹಾರಲಣಿಗೊಂಡಾಗ
ನಿನ್ನ ಹಾರಿಕೆ ನಿನಗೆ, ನಿನ್ನ ರೀತಿ."

ಎರಡನೆಯ ಗುಂಪಿನಲ್ಲಿ ಕನ್ನಡಿಗ, ಹಿಂದೂ ಭಾರತೀಯರು, ಕ್ರಾಂತಿಕಾರ ತ್ಯಾಗಿ, ದಾನಿ, ಸಮತಾವಾದಿ, ಅಸುರ ಇವರ ಮಾತುಗಳು.

"ಕರುನಾಡಿನಲ್ಲಿಹುದು ಜಾತಿಮತ್ಸರ, ದ್ವೇಷ ಯಾದವೀ ಕಲಹವಿಂದು
ನಾಡಿನೆದೆಯಲಿ ಧರ್ಮ-ಮತಗಳ ಪೆಡಂಭೂತ ಬೀಡುಬಿಟ್ಟಿಹುದು ಬಂದು''

ಹಿಂದೂ ಭಾರತೀಯ ಎಂಬ ಕವನವು ಭಾರತದ ಸತ್ವವನು ತೋರುವುದು. ಇಂದಿನ ಬೇನೆಯನ್ನು ತೋರಿಸುವುದು :

"ದ್ರಾವಿಡರ ಮಂತ್ರ-ತಂತ್ರಗಳೊಡನೆ ಬೆರೆತವೈ
ಆರ್ಯಕುಲ ಮುನಿವರರ ವೇದಘೋಷ
ದ್ರಾವಿಡರ ಮೈಕಟ್ಟಿನೊಡನೆ ಒಂದಾಯಿತೈ
ಆರ್ಯಕುಲದೀಪಕರ ಅತುಲ ಶೌರ್ಯ.
ಸಂಸ್ಕೃತಿಗಳೆರಡಿಂತು ಮೆರೆಯೆ ಸಂಗಮವಾಗಿ
ಮೆರೆವ ರಾಜ್ಯಕೆ ಮೇರೆಯೆಳೆವರಾರು ?
ದೇಹ ಬಲ, ಬುದ್ಧಿ ಬಲ, ಆತ್ಮ ಬಲ ಇವುಗಳಲಿ
ಭರತವರ್ಷವನು ಹೀಗಳೆವರಾರು ?
ಅದರ ಧರ್ಮದ ಮಹಿಮೆ, ಅದರ ಕರ್ಮದ ಹಿರಿಮೆ,—
ಇದರ ಕೀರ್ತಿಯನಲ್ಲಗಳೆವರಾರು ?

ಆದರೀ ಮನ್ವಂತರದ ರೋಗ ಬೇರೆಯಿದೆ.
ಯಾವ ಧನ್ವಂತರಿಯು ಬರುವ, ಕಾಣೆ
ಹಳತೆಲ್ಲ ಹಳಸಿಹುದು; ಹೊಸತೆಲ್ಲ ಕಸುಕಿಹುದು;
ಯುಗಾಂತರವು ಬರುವನಕ ತಪ್ಪದಿದಃ ಬವಣೆ.''

'ದಾನಿ'ಯು ದೊಡ್ಡವನು. ನೀಡುವ ಕೈ ಕಿರಿದಲ್ಲ, ಎಂಬದರಲ್ಲಿದ್ದ ಅರ್ಥವು ವ್ಯಾಪಕವಾದುದು :

"ದಾನದಂಥ ಪುಣ್ಯವಿಲ್ಲ. ದಾನಿಯಂಥ ಮೌನಿಯಿಲ್ಲ.''
ದಾನಿ, "ನಿನ್ನ ಮನೆಯು ಧರ್ಮಶಾಲೆ. ದೇವನದರ ಒಡೆಯನೆಂದೆ."

ಸಮತಾವಾದಿಯಂತಹ ಆಶಾವಾದಿ ಬೇರೊಬ್ಬನಿಲ್ಲ. ಅವನು ಬದುಕುವುದೆ ನಾಳಿನ ಬೆಳಗಿನ ಮೇಲೆ. ನಿನ್ನೆ ಇಂದುಗಳೆಲ್ಲ ಹಳೆಯುವು; ಕೊಳೆಯುವು. ಸಮತಾವಾದಿಯ ಮಾತುಗಳು ಹೇಗೆ :

"ಯುಗಯುಗದೊಳನ್ಯಾಯ ಕೋಟೆಯಲಿ ಮುಳುಗಿರುವ
ಧಾರುಣಿಗೆ ಬರಬಹುದು ಧನ್ಯತೆಯ ಬೆಳೆಯು.
ಹಗೆತನದ ಹಾವು ಕಾಲ್ತೊಡಕಿರುವ ಮನುಕುಲಕೆ
ಇಂದಿಲ್ಲ ನಾಳಿರುವದೊಗೆತನದ ಕಳೆಯು.''

'ಅಸುರ'ದಲ್ಲಿ ಆಸುರೀ ಶಕ್ತಿಯು ಉಗಮ, ಬೆಳಗೆ, ಕೊನೆ ಹೇಗಾಗುವುದು ಎಂಬದನ್ನು ಹಿಟ್ಲರನಂತಹ ಅಸುರನನ್ನು ಕಣ್ಣು ಮುಂದಿಟ್ಟುಕೊಂಡು ಬರೆಯಲಾಗಿದೆ. ತನ್ನ ತಾನು ಗೆಲಲಾರದವ ಜಗವನ್ನು ಹೇಗೆ ಗೆದ್ದಾನು? ತನ್ನ ತಾನು ಗೆಲುವುದು ದೈವೀಶಕ್ತಿ. ಜಗವ ಗೆಲ್ಲುವ ಹಟ ಆಸುರೀ ಶಕ್ತಿಯದಃ. ಹಾಗೆ ಭ್ರಮಿಸಿಕೊಂಡು ಹೊರಟವನು ತಾನೆ ಹಾಳಾಗಿ, ತನಗಾಗಿ ಇತರರನನ್ನು ಅವರು ತಿಳಿಯದೆಯೆ, ತಿಳಿದೂ ತಡೆದುಕೊಳ್ಳಲಾರದೆ ಹಾಳು ಮಾಡಿದ ಉದಾಹರಣೆಗಳು ಪುರಾಣ, ಇತಿಹಾಸಗಳಲ್ಲಿ ತುಂಬಿವೆ. ಆದರೆ ಹಿಂದಾದುದನ್ನು ನೆನೆದು ಮುಂದೆ ಬರುವ ಸಂಕಟಕ್ಕಾಗಿ ಪಾಠ ಕಲಿಯಬೇಕೆಂಬುದು ಇತಿಹಾಸ ವಾಣಿಯಾಗಿದ್ದರೂ ಅಸುರರು ಉದಯಿಸಿ ಬರುವಾಗ ವಾತಾವರಣವೇ ಭ್ರಮೆಯಲ್ಲಿ ಮಸುಕಿ. ವಿವೇಕ ಶಕ್ತಿ ಉಡುಗಿ

ಹೋಗಿರುವುದು. ಅಸುರರ ಅಸುವಿಗೆ ಸಂಚಕಾರ. ಇಷ್ಟಾಗುವಾಗ ಜನ ಸತ್ತಿಹುದು. ಆದರೆ ಇದು ತಪ್ಪಿದ್ದಲ್ಲವೇನೊ ?

ಸತ್ಯಾಗ್ರಹಿ ಮತ್ತು ಕರ್ಮಯೋಗಿ ಈ ಕವನಗಳು ಮೂರನೆಯ ಗುಂಪಿನಲ್ಲಿ ಬರುವುವು. ಇವುಗಳಲ್ಲಿ ವಸ್ತುನಿಷ್ಠ ತಾತ್ವಿಕ ವಿಚಾರಗಳು ಇರದೆ ವ್ಯಕ್ತಿಯನ್ನುದ್ದೇಶಿಸಿ ಅವರ ಚಿತ್ರಗಳಿವೆ. ರೂಪಕ ನಿರೂಪಣೆಯಂತಹ ವ್ಯಕ್ತಿಚಿತ್ರ. ಹೆಸರಿಲ್ಲದೆ ಹೆಸರಿಸುವಂತಹವು.

'ಸನಾತನಿ ವಿನೂತನಿ'ಯಲ್ಲಿ ಇಂದಿನ ಯುಗಕ್ಕೆ ಆವಶ್ಯಕವಾದ ಮಾತುಗಳಿವೆ. ಹಳೆಯ ದಾರಿಯನು ತುಳಿದವಗೆ ಶ್ರದ್ಧೆಯೆ ಅನುಗೋಲು ಹೊಸ ಹಾದಿ ತುಳಿಯಬೇಕೆಂದವಗೆ ಬುದ್ಧಿಯೆ ಒರೆಗಲ್ಲು. ಎರಡೂ ಏಕ ಮುಖದ ದಾರಿಗಳು. ಇದರಿಂದ ಒಬ್ಬೊಬ್ಬರಿಗೆ ತಮ್ಮದೇ ಮುಕ್ತಿ ದೊರೆಯ ಬಹುದಾದರೂ ಇದರಿಂದ ಪ್ರಪಂಚಕ್ಕೆ ಹಿತವಿಲ್ಲ. ಹೃದಯದ ಒಲವು ಒಂದು; ಬುದ್ಧಿಯ ಸಿಡಿತ ಇನ್ನೊಂದು ಬುದ್ಧಿಭಾವಗಳ ಏರು ಜೋರುಗಳ ತೂಕ ಹಿಡಿಯುವುದು ವಿವೇಕ. ಅದಕ್ಕಾಗಿ ಸಮತೂಕಕ್ಕೆ ವಿವೇಕಕ್ಕೆ ಒಂದೇ ದಾರಿ ಸಲ್ಲುವುದಿಲ್ಲ. ಇನ್ನೊಂದು ಹೇಗಿದೆ ತಿಳಿಯಬೇಕು. ತಿಳಿಯದೆ ಹೀಗಳೆವುದು ಹಿತವಲ್ಲ.

"ಓ ಸನಾತನಿ, ಹೋಗು ಪಡುವಣದಿ ಹುಟ್ಟು.
ಆಗ ತಿಳಿವುದು ನಿನಗೆ ತಿಳಿವಿನಾ ಗುಟ್ಟು.
ಓ ವಿನೂತನಿ ಮತ್ತೆ ಮೂಡಣಕೆ ತೆರಳು
ಆಗ ಹೊಳೆವುದು ಕರ್ಮಕಾಂಡದಾ ತಿರಳು."

ಇದೇ ವಿಜ್ಞಾನ. ವಿಜ್ಞಾನ ಸಹಿತವಾದ ಜ್ಞಾನವೇ ಮೋಕ್ಷದ ಮಾರ್ಗ ತೋರುವುದು. ಜಗನ್ನಿಯಮಗಳ ತಿಳಿವ ಶಕ್ತಿಯೆ ವಿಜ್ಞಾನ.

"ವಿಜ್ಞಾನ ಸಾರ್ಥವು; ಶಕ್ತಿ ಸಂಚಯವಹುದು.
ಅದನಪವ್ಯಯಗೊಳಿಸೆ ರಾಜಕಾರಣಿಯು
ಲಕ್ಷ್ಮಿಯನು ಕಾಲ್ಮುರಿದು ಸೆರೆಯಿಟ್ಟ ಧನಿಕನೊಲು
ಹೊಸ ಜಗಕದೆಲ್ಲಿ ಸಾರಿಣಿಯು–ಕಾರಣಿಯು.
....ವಿಜ್ಞಾನ ಮೆರೆಯುವುದು ಜ್ಞಾನದಡಿಗಲ್ಲಾಗಿ
ಸಂಸ್ಕೃತಿಯ ಮಂದಿರದ ದ್ವಾರವಾಗಿ."

ಇದು ತಿಳಿದರೆ ಪ್ರಕೃತಿ; ಇಲ್ಲದಿರೆ ಎಲ್ಲ ವಿಕೃತಿ; ಹೊಂದಿಸಿಕೊಂಡರೆ ಅದೇ ಸಂಸ್ಕೃತಿ.

ಐದನೆಯ ಗುಂಪಿನದು ಒಂದು ವೈಶಿಷ್ಟ್ಯವೆಂದರೆ ಅಲ್ಲಿ ಆತ್ಮಚರಿತಾತ್ಮಕವಾದ ಕವನಗಳು ಇವೆ. ಕವಿಯ ಜೀವನದಲ್ಲಿ ಎದುರು ಬಂದ-ಸಹವಾಸ ದೊರೆತ ವ್ಯಕ್ತಿಗಳು ಒಂದು ಮಾದರಿಯನ್ನು ಒದವಿಸಿದ ಹಾಗೆ ಮಾಡಿವೆ. ಕವನಗಳನ್ನು ಓದಿ ನೋಡಿದಾಗ ಯಾರ ಬಗ್ಗೆ ಇವು ಬರೆಯಲ್ಪಟ್ಟಿವೆ ಎಂಬುದು ಸ್ಪಷ್ಟವಾಗಿ ಕಾಣುವುದು. ಆದರೆ ವ್ಯಕ್ತಿ ಚಿತ್ರವೇ ಈ ಕವನಗಳ ಉದ್ದೇಶವಾಗಿರಲಿಕ್ಕಿಲ್ಲ ಏಕೆಂದರೆ ಈ ಕಾವ್ಯದಲ್ಲಿ 'ಬಾಳದೇಗುಲ' ದಲ್ಲಿ ಕಂಡು ಬಂದ ಜನಜೀವನದ ಚಿತ್ರ ನಿರೂಪಣೆ ಇದೆ. ವ್ಯಕ್ತಿಗಳನ್ನು ಬಿಟ್ಟು ಜೀವನವಿಲ್ಲ. ಯಾವುದೊಂದು ವ್ಯಕ್ತಿಯನ್ನು ಕಣ್ಣು ಮುಂದಿಟ್ಟುಕೊಂಡು ಚಿತ್ರಣ ಮಾಡಿದರೂ ಅದೊಂದು ಮಾದರಿ ಎಂದೇ ತಿಳಿದರೆ ಮಹಾಕಾವ್ಯದ ವಸ್ತುನಿಷ್ಠತೆಗೂ ಕವಿಯ ಪ್ರತಿಕ್ರಿಯೆಯ ವ್ಯಕ್ತಿನಿಷ್ಠತೆಗೂ ವ್ಯತ್ಯಯ ಬರುವುದಿಲ್ಲ.

"ಕನಸಿಗರ ಜೀವನವು ಬೆಳಕಿನಂತಃಸ್ತಂಭವನು ಸುತ್ತುವುದರತ್ನಲತೆಯ ತೆರದಿ" ಎಂದು 'ಕನಸಿಗ' ಕವನದಲ್ಲಿ ಹೇಳಲಾಗಿದೆ. ಮುಂದುವರೆಯುತ್ತ,

"ಇಂದು ಕಂಡಿಹ ಕನಸೆ ಅಹುದು ನಾಳಿನ ನನಸು
ವ್ಯಕ್ತಿಯಾ ಸವಿನೆನಸೆ ಜನಜೀವನದ ಸೊಗಸು
ಇಂದು ನಾವ್ ಹೂಡಿರುವ ಹೊ ಬೆಳಕಿನಾಟವೇ ಕಾಯ್ವ ನಕ್ಷತ್ರ ನಾಳೆ"

ಕಲೋಪಾಸಕನು ಮಾನವನು. ಜೀವನ ರಂಗದಲ್ಲಿ ಅವನದೊಂದು ಸ್ಥಾನ. ವೈಯುಕ್ತಿಕವಾಗಿ ಅವನು ಧಾರ್ಮಿಕನಿರಬಹುದು, ಉಪದೇಶಕನಿರಬಹುದು. ಆದರೆ ಕಲೋಪಾಸಕನೂ ಇರುವನು. ಆದ್ದರಿಂದ ಕಲೋಪಾಸಕರ ಗುಂಪಿನಲ್ಲಿ ಒಳಪದರು ಕಾಂಬುವುದು. ಎರಡು ವಿಭಿನ್ನ ಮಾನಸಿಕವೃತ್ತಿ ಪ್ರವೃತ್ತಿ ಕಂಡು ಬರಬಹುದಾದರೂ 'ಕಲೋಪಾಸಕ'ನ ಪ್ರಭಾವವೇ ಎದ್ದು ಕಾಣುವುದು. ಇನ್ನೊಂದು ಇದಕ್ಕೆ ಹೊಂದಿಕೊಳ್ಳಬೇಕಾಗುವುದು. ಧಾರ್ಮಿಕನಾದ ಕಲೋಪಾಸಕನು ಹೀಗೆ ಇರುವನು :

“ ಧರ್ಮನಿಷ್ಠೆಗಾಗಿ ನೀನು ಪಟ್ಟ ದುಃಖಪರಂಪರೆಯು
ನಿನ್ನ ಕೃತಿಯಲೊಡಮೂಡಿಸಲೆಂತು ಕೃತಕವು ?
ನೋವು ಬೇಕು. ಬೇಕು ಜೊತೆಗೆ ಹಿಗ್ಗನೊರೆವ ಕಲೆಯನೆಲೆಯು.
ಹಿಗ್ಗಿನಾಸರಿರದ ದುಃಖ ಮಾತ್ರ ಹತಕವು ?
“ ನಿನ್ನೊಳೊಂದು ಶ್ರದ್ಧೆ ಜನಿಸಿ ನವೋತ್ಸಾಹವೊಂದು ಗುಣಿಸಿ
ದೈವಕಾಣಿಸಿದ್ದ ತೀವ್ರ ಗಾಯವಮಾದಿದೆ.
ಹೊಸತು ಬಾಳು, ಹೊಸತು ಗಾನ; ಚೆಲುವಿನ ನಾಲ್ಮೊಗದ ಧ್ಯಾನ
ಇದರ ನಾಂದಿಯೊಸಗೆಗೆಂದು ದಾರಿ ಕಾದಿದೆ.
“ ಚೆಲುವು ಗೆಯ್ಮೆಗಳ ನಡುವಿನ ಭೇದಭಾವವಳಿದು ಹೋಗಿ
ಕೃತಿ ಸುಂದರ ಚಿತ್ ಸುಂದರ ಹೃತ್ ಸುಂದರವಾಗಿದೆ.
ತ್ರಿಮುಖವಾದ ಚೆಲುವು ಬಂದು ಬಾಳರುದ್ರತೆಗಳನಳಿಸಿ
ಸ್ವಾನಂದದ ಸೆಲೆಯನಿತ್ತು ಕ್ಷೇಮವೆಂದು ಸಾಗಿದೆ.”

ಕಲೋಪಾಸಕನಾದ ಸುಧಾರಕನ ಜೀವನದಲ್ಲಿ ಹೀಗೆ ಕಂಡು ಬಂದಿದೆ.

“ ಧರ್ಮವ ಹೆಸರಿನಲ್ಲಿ ಮಾಯವಾಯ್ತು ನಮ್ಮ ಹಿರಿಮೆಯಲ್ಲ
ಉರುಳುತಿರುವ ಕಾಲಚಕ್ರವನ್ನು ಕಾಣದೆ.
ನಿಂತಲ್ಲಿಯೆ ನಿಂತು ನಾವು ನಗೆಗೇಡಿಗಳಾದೆವೆಂದೆ
ಮನ್ವಂತರವನ್ನು ಮರೆತು ಗತಿಯ ಕಾಣದೆ.
“ ಬೇರೆ ದೇಶಗಳ ನವೀನ ಜಗ-ಯುಗಗಳ ನಿಯಮವರಿತು
ನವ ಸಂಸ್ಕೃತಿಗೆಂದು ಕೋಟೆಗಳನು ಕಟ್ಟಿ ಸಾಗಿರೆ
ಗತಧರ್ಮಕೆ ಜೋತುಬೀಳುತಾತ್ಮಹತ್ಯಕಣಿಗೊಳುವರೆ
ಭಾರತೀಯರವರ ಜ್ಞಾನ ಬೆಂತರದೊಲು ತೂಗಿರೆ.
“ ಚೇತನಗೊಳಿಸಿರುವೆ ನೀನು ಘನೋನ್ನತಿಯ ಪದವಿಗೇರು-
ತಧೋಗತಿಯ ಯಾತನೆಗಿಳಿದಿರುವ ನಾಡನು.
ಪಾರತಂತ್ರ್ಯ ತೊಲಗಲೊಡನೆ ಸ್ವಾತಂತ್ರ್ಯವು ಬಾರದೆಂದೆ-
ಬದಲಿಸದಿರಲೆಮ್ಮ ಜನದ ಕಟ್ಟು ಪಾಡನು.
“ ನೀನದೆನಿತೊ ಬವಣೆಬಟ್ಟು ಹುದುಗಿ ನಾಡಕಟ್ಟು ಪಾಡೆ
ಕೊಳೆತಿಹುದನು ಕಂಡುಹಿಡಿದು ಕೊಡಲಿ ಎತ್ತಿದೆ.

ಅಂತೆ ವಿಡಂಬನೆಯ ಬಾಣಗಳ ಮಳೆಗರೆಯುತಿಲ್ಲೆಡೆ
ಅಂಥ ಶ್ರದ್ಧೆಯಾಳುವ ಕೋಟೆಗಳನು ಮುತ್ತಿದೆ."

ಕಲೋಪಾಸಕನಾದ ಉಪದೇಶಕನು ತನ್ನ ಪಾತ್ರವನ್ನು ಹೇಗೆ ನಿರ್ವಹಿಸಿದನು ಎಂಬುದನ್ನು ಅವನ ಬಗ್ಗೆ ಇದ್ದ ಈ ಕವನದಲ್ಲಿ ಹೇಳಿದೆ.

" ದೇವ ದೂತನಂತೆ ನೀನು ಭಾರತ ಸಂಚಾರಿಯಾಗಿ
ಕಂಡ ದೃಶ್ಯದಿಂದ ನಿನ್ನ ಹೃದಯ ದೀರ್ಣವಾಯಿತು.
ನಾಡ ಪಂಚ ಪ್ರಾಣಗಳನು ತಿರುಗಿ ತರುವ ಸಂಜೀವಿನಿ
ಯಾವುದೆಂಬ ಯೋಚನೆಯಲಿ ಮನವು ಕೀರ್ಣವಾಯಿತು
" ಆಗ ನಿಂತೆ ಪರಶುರಾಮನಂತೆ ನೀನು ಕೊಡಲಿ ಎತ್ತಿ
ಕೌಶಿಕನಂತಪ್ಪಳಿಸುತ ಜಟೆಯ ಧ್ವನಿಯನೇರಿಸಿ
ಗರ್ಜಿಸಿದ್ದೆ ನಿತ್ಯ ನಾಡ ಜನವನು ಹೌಹಾರಿಸಿ.
" ನಿಷ್ಕಾಮದ ಜೀವಿತವದು, ಧರ್ಮಸಮನ್ವಯದ ಸಾರ
ಮಾನವ ಧರ್ಮದ ಗುರಿಯದು; ಬೇರೆ ಧರ್ಮವಿಲ್ಲವು
ದೇವತ್ವವದೇನೆ ಇರಲಿ; ಮಾನವತ್ವವನ್ನೆ ಪೂರ್ಣ
ಗೊಳಿಪ ಗೆಯ್ಮೆಯುಳಿದು ನರಗೆ ಬೇರೆ ಕರ್ಮವಿಲ್ಲವು "

ರೂಪಾರಾಧಕನು ಯಾರು ಎಂದು ತಿಳಿಯಬೇಕು. ಅವನಿಗೆ ರೂಪು ಮುಖ್ಯ. ಅದರಿಂದ ಒಳಗಿನ ತಿರುಳನು ಕಾಣುವ. ಒಳಗೊಂದು ಹೊರಗೊಂದು ಇರುವುದು ತಿಳಿವುದು ಮಾತಿನಿಂದ ಜೀವನದ ರೀತಿಯಿಂದ. ರೂಪದಿಂದಲ್ಲ. ರೂಪವು ಒಳಸತ್ವದ ಹೊರಪ್ರಕಟಿತ ಆಕಾರ. ನೋಡಲು ಸುಂದರವಾಗಿದ್ದುದು ಒಳಗೂ ಹೊರಗೂ ಹಾಗೆಯೆ ಇರಬೇಕು. ಇರುವುದು. ಏನಾದರೂ ವ್ಯತ್ಯಾಸ ಕಂಡರೆ ಅದು ವಾತಾವರಣದ್ದು ಅದನ್ನು ಇಲ್ಲಿ ರೂಪಾರಾಧಕದಲ್ಲಿ ತೋರಿದೆ.

" ಅಂದರಿದನು ಅಂದರದನು; ಏನೆಂದರೇನು ನಿನಗೆ
ನೀನು ನೀನೆಯಾಗಿ ನಿಂತು ಬೆಳಕ ಬೀರುವೆ.
ಶ್ರುತಿ ಸುಂದರ ಕಾವ್ಯದಲ್ಲಿ ವಾಗರ್ಥವ ತೇಲಿಸುತ್ತ
ಜೀವ ಕಂಡ ಸವಿಯ ಲೋಕಕೆಲ್ಲ ಸಾರುವೆ.

" ಲೋಕದಾಚೆಗಿರುವುನೊ ತಿಳಿಯೆ ಲೋಕದಲ್ಲಿ ಸೊಬಗ
ಕಾಣ್ಬಕಣ್ಣೆ ನಿನ್ನ ಜೀವವೆಂದು ನುಡಿದಿಹೆ
ಲೋಕ ಸಟೆಯೊ ದಿಟವೋ ಕಾಣೆ ಜೀವಚಕ್ಷು ಸತ್ಯವೆಂಬ
ಶ್ರದ್ಧೆಯಿಂದ ಬಾಳ ಬಟ್ಟೆಯಲ್ಲಿ ನಡೆದಿಹೆ.
" ರೂಪವೊಂದೆ ನಿನ್ನ ಕಣ್ಣು, ಪ್ರೀತಿಯೆನಲು ನುಡಿವೆ ನೀನು
ರೂಪವೇ ಮುಖ್ಯ. ರೂಪವಿಲ್ಲರ್ಥವು
ವ್ಯರ್ಥವಹುದು. ಕಲೆಯ ಸಾರ್ಥಕತೆಯು ರೂಪದೆಸಕದಲ್ಲಿ
ರೂಪವೆ ಅಮರತೆಯ ದಾರಿ; ಪರಮಾರ್ಥವು.

' ಸಾಕ್ಷಿಕ 'ದಲ್ಲಿ ಬರುವ ಚಿತ್ರ ಸಾಕ್ಷಕನದು. ಸಾಕ್ಷಿಯಾಗಿ ನುಡಿದವನಿಗೆ ತನ್ನದೆಂಬ ಯಾವುದೂ ಇರದು. ಅವನು ಅನಾಸಕ್ತ ಯೋಗಿ. ಕಂಡದ್ದನ್ನು ಮಾತ್ರ ಕಂಡಂತೆಯೆ ನುಡಿವ ಧೈರ್ಯ ಅವನದು. ಯಾರು ಏನು ತಿಳಿವರೆಂಬ ಹೆದರಿಕೆಯಿಲ್ಲ. ಸತ್ಯ ಮರೆಮಾಚುವ ಹಂಗಿಲ್ಲ. ಅದಕ್ಕೆ ಅವನು ನಿಜವಾದ ಸಾಕ್ಷಿಕ. ಸತ್ಯದ ದರ್ಶಕ.

" ನಿಂತೆ ನೀ ಸ್ಮಶಾನ ರುದ್ರನಂತೆ ಮಾಯೆಗಳನು ಬಿಸುಟು
ನಿನ್ನ ಬಾಳ ಸುಖದುಃಖ ಬೂದಿಯಾಗಿಸಿ
ನಿನ್ನ ಮನವನಿಳಿಯ ರುದ್ರ ಭದ್ರತೆಗಳು ಸೂಕ್ಷ್ಮತೆಗಳು
ಹಿತಾಹಿತಗಳೆಲ್ಲವಲೆವ ಬೀದಿಯಾಗಿಸಿ.
" ಹಗಲು ರಾತ್ರಿಯೆಲ್ಲವೊಂದೆ ನಿಯಮವೆಂಬುದಿಲ್ಲ ನಿನಗೆ
ನಿಯತಿ ಕಾಡಿತೆಂದು ನಿಯಮಗಳನು ಮೀರಿದೆ.
ವಜ್ರಿಗೆ ಸಹ ಮಣಿಯದಂಥ ವಜ್ರದೇಹವಿದು ನಿನ್ನದು
ನಿನ್ನ ನಿರಂಕುಶತೆಯೆದುರು ಕೈಯ್ಯ ನೂರಿದೆ.
" ಧರೆಯ ನ್ಯಾಯಸ್ಥಾನದಲ್ಲಿ ಸಾಕ್ಷಿಯಾಗಿ ಕಂಡುದನ್ನು
ಸಾಕ್ಷಿಗಾರನಾಗುತಂಜದಳುಕದೊರೆಯುವೆ
ಜನತೆ ನಿನ್ನ ನೋಡಿಕೊಳ್ಳಲದುವೆ ನಿನ್ನ ಭತ್ತೆಯೆನುವೆ
ಇಲ್ಲದಿರಲು ಸಾಕ್ಷಿ ಕಜ್ಜವೆಂದು ತಿಳಿಯುವೆ.
" ಸ್ಥಿತ ಪ್ರಜ್ಞನಾಗಿ ಬುವಿಯ ಸುಖದುಃಖವ ಕಾಣುತಿರುವಿ
ಯಂತೆ ಅದರ ತಳಬುಡಗಳನೆಲ್ಲವರಿತಿಹೆ.

ಲೋಕಪದ್ಧತಿಗಳನೊರೆದು ನೋಡಿ ಸತ್ಯದೊರೆಗೆ ಸತ್ಯ-
ದಾಭಾಸವ ತೆರೆದು ತೋರ್ವುದರದಲಿ ನುರಿತಿಹೆ.''

'ಕಾವ್ಯಗುರು' ಯಾರು? ಹೇಗಿಳಬೇಕು ? ಹೇಗಿದ್ದಾನೆ ? ಎಂಬುದರ ವಿವರವು ಈ ಕವನದಲ್ಲಿ. ಕವಿಗೆ ಒಬ್ಬ ಗುರುವು. ಅವನು ಕಾವ್ಯಗುರುವು. ಈ ಹಿನ್ನೆಲೆಯಲ್ಲಿ ಇದನ್ನು ನೋಡಬೇಕು. ಸಂಬಂಧಾತ್ಮಕ ಕವನವಿದು. ಭಕ್ತಿ, ಕೃತಜ್ಞತೆ, ಇವು ಇಲ್ಲಿನ ಮುಖ್ಯ ದನಿಗಳು. ಅವುಗಳನ್ನು ಈ ಪದ್ಯಗಳು ಎತ್ತಿ ತೋರುವುವು :

"ಸ್ವಯಂಸಿದ್ಧ ಚಿತ್ ಪ್ರಕಾಶ ಪರಮಹಂಸ ಪದದ ಪ್ರಜ್ಞೆ
ಹುಟ್ಟಿನೊಡನೆ ನಿನ್ನ ಜೊತೆಯುಲಲೆದು ಬಂದವು.
ಬೇರೆ ಜ್ಯೋತಿ ಬೆಳಕುಗರೆದು ನಿನ್ನಲಿದ್ದ ಪರಂಜ್ಯೋತಿ
ಯನ್ನೆ ಮನದ ಪ್ರಾಂಗಣದಲಿ ಮುಂದೆ ತಂದವು.
"ಕನ್ನಡದಾ ಪದ ಸಂಪದ ಮತ ಕಾವ್ಯದ ಮಾರ್ಗದೇಶಿ
ಯೊಳಗದೊಂದು ಹೊಸ ಮಂತ್ರದ ಗೆಲುವ ತುಂಬಿದೆ.
ಪೂರ್ಣ ಯೋಗದಾ ಸಮಗ್ರ ಬೆಳಕಿನಲ್ಲಿ ಮತವೆಲ್ಲವ
ನೊರೆದು ನೋಡಿ ಪೂರ್ಣತೆಯನು ನೀನು ನಂಬಿದೆ.
"ಸತ್ಯಕಿಲ್ಲವೆನಲು ಸಾವು ಆತ್ಮಕೆಂತು ಬಹುದು ಸೋಲು ?
ನಿನ್ನ ಸಖರನಾತ್ಮವಿದರನಾಗಿ ಮಾಡಿದೆ.
ಅರವಿಂದರ ಸರಸಿಯಲ್ಲಿ ಮತ್ತೆ ರವಿಯ ಜ್ಯೋತಿಯಲ್ಲಿ
ಗೆಳೆಯರೊಡನೆ ಬಗೆಯ ಬಯಲೊಳಾಟವಾಡಿದೆ.
"ದೇವನಂತೆ ನಾಟ್ಯರೂಪಿ ನಿನ್ನ ಕಲೆ; ಅನೇಕದಲ್ಲಿ
ಏಕಮೇವ ವಸ್ತುವನ್ನೆ ಕುರಿತು ಹಾಡಿತು.
ಶೈಲಿಯಲ್ಲಿ ನವರಸಗಳು; ಚಿರಸ್ಥಾಯಿ ಮನದ ಶಾಂತಿ
ತಿರುಳಿನಲ್ಲಿ ದಿವ್ಯಭಾವ ಗುಣವು ಮೂಡಿತು.
"ನಾನದೊಂದು ಕಿನ್ನರಿಯನು ಹಿಡಿದು ಹಾಡಿ ಬಾಳುತಿದ್ದೆ.
ಕೊಳಲನಿತ್ತು ಧೀರ ಲಲಿತ ನುಡಿಯ ನುಡಿಸಿದೆ
ವಿವಿಧ ರಾಗಗಳನು ಕಲಿಸಿ ಯೋಗ ಭೋಗಗಳನು ತಿಳಿಸಿ
ಒಂದೆ ತಾನದೊಂದೆ ಸ್ವರದ ಸೆರೆಯ ಬಿಡಿಸಿದೆ.''

'ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ." ಎಂಬ ಮಾತು ಎಲ್ಲರಿಗೂ ಗೊತ್ತು. ಜಗದ ನೋವಿಗೆ ತಮ್ಮ ನೊಗವಕೊಟ್ಟು ನೆರವಾಗುವ ಪ್ರವೃತ್ತಿ ಉದಾರ ಚರಿತರದು. ಸುತ್ತಲೂ ದುಃಖವಿರುವಾಗ ತಮ್ಮ ಸುಖವೂ ದುಃಖವೆನ್ನಿಸುವು ಈ ಪುಣ್ಯಾತ್ಮರಿಗೆ. ಇಂತಹರು ಜೀವಿಸಿರುವರೆಂಬ ಕಾರಣ ದಿಂದಲೇ ಸಾಮಾಜಿಕ ಅನ್ಯಾಯಗಳಿಂದುಂಟಾಗುವ ದುಃಖಗಳು ಕಡಿಮೆ ಯಾಗುವುವು. ಸುಖದ ಹಂಚಿಕೆಯಾಗುವುದು. ಸುಖವನ್ನು ಹಂಚುವವನು ಸಣ್ಣವನೆ. ಅವನು ದೊಡ್ಡವನೆಂದು ಜನ ತಿಳಿವುದು. ಅವನು ದೊಡ್ಡವನಿ ದ್ದರೂ ತಾನು ಸಣ್ಣವನೆಂದೇ ಅವನು ತಿಳಿವನು. ಅದರಲ್ಲಿಯೇ ಅವನ ದೊಡ್ಡಿತೆ ಇದೆ. ಅದನ್ನು ಹೀಗೆ ಹೇಳಲಾಗಿದೆ, 'ಉದಾರ ಚರಿತೆ' ಕವನದಲ್ಲಿ.

'' ನಾಡು ನಿನ್ನ ತಲೆಯಲಿಟ್ಟು ಕುಣಿಯುತಿರಲು ನೀನು ನಾಡ
ಚರಣ ಧೂಳಿಯನ್ನು ತಲೆಯಲಿರಿಸಿ ಕುಣಿಯುವೆ
ಜನತೆ ನಿನ್ನ ಹಿರಿಮೆಗಳನು ಗಾನಮಾಡಿ ತಣಿಯದಿರಲು
ಜನತೆಗಿರುವ ದೈವಿಕತೆಯ ಹಾಡಿ ದಣಿಯುವೆ.
'' ನಿನ್ನ ಕಾವ್ಯ ಜೊನ್ನ ಬಯಲು; ಅಲ್ಲಲ್ಲಿಗೆ ಪಲ್ಲವಿಸಿದ
ತರುಲತೆಗಳು; ನೋಡಿದಲ್ಲಿ ನಿದ್ರಿಸಿರುವುದು
ತಣ್ಬೆಳಕದು; ಕೊಳದಿ ನಿನ್ನ ಬಿಂಬ ಬಿಂಬಿಸಿರಲು ಚರಾ—
ಚರದಮೇಲೆ ಅದರ ಮಾಯೆ ಮುದ್ರಿಸಿರುವುದು.
'' ಬಾಳನ್ಯೂನತೆಗಳ ಕಂಡು ಕೂರ್ಗಣೆಯೆಸೆಯುವ ಭಾರ್ಗವ—
ನಾಗಲಿಲ್ಲ; ಜನಕನಾದೆ, ಕ್ಷಮೆಯ ಮೂರ್ತಿಯು
....ಬಾಳಹಿರಿಮೆಗೊಲಿದೆ ಒರಗಿ ಬಾಳ ಕೀಳ್ಮೆಗೆದೆಯು ಕರಗಿ
ಆಳವಾಗಿ ತೋರಿ ಪ್ರೀತಿ ಕರಣೆ ಖೇದವ.''

ಈ ವಿಭಾಗದಲ್ಲಿಯ ಕವನಗಳು ಒಂದೊಂದು ವ್ಯಕ್ತಿಯನ್ನುದ್ದೇಶಿಸಿ ಬರೆಯ ಲಾಗಿದ್ದರೂ ಆ ವ್ಯಕ್ತಿಯ ವ್ಯಕ್ತಿತ್ವದ ವಿಶಾಲತೆಯಲ್ಲಿ ನಾಡು-ನುಡಿ ಸ್ಫೂರ್ತಿ ಪಡೆದ ಸ್ಫೂರ್ತಿಯನು ತೋರುವುದೇ ಮುಖ್ಯ ಉದ್ದೇಶವಾಗಿದೆ ಎಂಬು ದನ್ನರಿಯಲೇ ಬೇಕು.

ಆರನೆಯ ಗುಂಪಿನಲ್ಲಿ ಕಣಸಿಗ, ಕವಿ,-ಅನುಭಾವಿ, ದುಃಖಿ, ನಿರ್ಲಿಪ್ತ, ಭಕ್ತ, ಹೀಗೆ ಕವನ ವಸ್ತುಗಳಿವೆ. ಓ ಕನಸಿಗ !

"ನಿನ್ನೊಳಗಿನ ಬೆಳಕೆ ಬೇರೆ; ಹೊರಬಾಳಿನ ಹೊಂಚಿ ಬೇರೆ" ಎಂದು ಕಣಸಿಗನನ್ನು ಗುರುತಿಸಿದ್ದಾರೆ. ಕವಿಯು-ಅನುಭಾವಿಯೂ ಅಹುದು. ಅವರ ಸಾಮ್ಯ-ವೈಷಮ್ಯಗಳನ್ನು ಇಲ್ಲಿ ತೋರಲಾಗಿದೆ-'ಕವಿ-ಅನುಭಾವಿ' ಕವನದಲ್ಲಿ.

"ನನ್ನ ನಿನ್ನ ದೃಷ್ಟಿಯೊಂದೆ, ಆದರೆಮ್ಮದೃಷ್ಟಬೇರೆ.
....ಒಂದೆ ಕಡಲ ಕೂಡಲಾವು ಗಂಗೆ-ಯಮುನೆ ಹರಿಯುತಿಹೆವು
ಪಾತ್ರದೀ ಪ್ರವಾಹವೊಂದೆ ಬೇರೆಯೆನಿಸಿದೆ.
....ನೀನು ಹಳ್ಳಿಯಾತನೆಂದು ಪಟ್ಟಣಿಗರು, ನಾನು ನಗರವಾಸಿಯೆಂದು
....ಹಳ್ಳಿ ಜನರು ದೂರ ಸರಿವರು.
ಅಗ್ನಿಪರೀಕ್ಷಣವು ನಿನಗೆ; ನನಗೆ ವಾಯುಪರೀಕ್ಷಣವು.
ನೀನು ಮಧುರ-ನಾನು ಚದುರ."

'ದುಃಖಿ' ಕವನದಲ್ಲಿ ಬಾಳುವೆಯ ಸತ್ಯಾಂಶಗಳು ಬಂದಿವೆ. "ಹುಟ್ಟಿದೊಡನೆ ಆಕ್ರಂದಿಸಿ ನರನು ಆಮರಣವು ನೋವಿಲ್ಲದೆ ಇರನು....ಯಾವ ಆಸೆಯಲಿ ಬೆಳೆವುದು ಬಾಳು ?....ಕಷ್ಟಪರಂಪರೆಯಾಳು ನರನು ತೆರಳ್ವದೆತ್ತ ?

....ಈ ತಿರುಗಣಿ ಹೊರಗೊಂದೇ ಹಾದಿ....ಅದುವೆ ಆತ್ಮಹತ್ಯೆ.
....ಪರಮಹಂಸ ಪದವನು ಪಡೆವಾತ, ಇಹನವ ಪೂತ, ಆತ್ಮವಿನೂತ

ಆದರೆ ಜನತೆಯ ಭಾಗ್ಯವಿಧಾತ ತಾ ದಯೆ ತೋರುವನೆ ?"

ಬಾಳಿನ ಸುಖ ದುಃಖಗಳ ಬಗ್ಗೆ ಸಮಭಾವ ತೋರಿದವನು ನಿರ್ಲಿಪ್ತ. 'ನಿರ್ಲಿಪ್ತ' ಕವನದಲ್ಲಿ ಅದರ ಬಗ್ಗೆ ಹೇಳಿಯದೆ. ನಿರ್ಲಿಪ್ತತೆಯು ಅಗತ್ಯವಾದ ಗುಣ. ಅದೊಂದು ನಿಲುವು.

"ಈ ಅಂಜನದ (ನಿರ್ಲಿಪ್ತತನದ) ಲೇಪವಿದ್ದು ನಯನದಿ ನೋಡೆ
....ವಿಶ್ವ ಚಕ್ರದ ನಿತ್ಯ ಗತಿಯು ಮಂಗಳವಾಯಿತು.

....ಮಾನವರ ನಡುವೆ ನಿರ್ಲಿಪ್ತ ನಿಂತಿರುವನವ
ಶ್ರವಣಬೆಳ್ಗೊಳದಿ ಗೊಮ್ಮಟವ ತೆರದಿ...."

ನಿರ್ಲಿಪ್ತನು ನಿರ್ಲಿಪ್ತನಾಗಿರಲಿಕ್ಕೆ ಆತ್ಮಶಕ್ತಿಯಲ್ಲಿಯ ವಿಶ್ವಾಸವೇ ಕಾರಣ. ದೇವನಲ್ಲಿಯ ಭಕ್ತಿಯೇ ಕಾರಣ. 'ಭಕ್ತ'ನು ಯಾರು ? ದೇವನಿಗೆ ನಿವೇದನೆ ಮಾಡಿಕೊಳ್ಳುವವನೇ ಭಕ್ತ: ದೇವ,

"ನನ್ನ ಹೃತ್ಕಮಲವಿದು ನಿನ್ನ ಕೋಮಲ ಸದನ.
ನಿನ್ನಪದ ಪದ್ಮವೇ ( ನನ್ನ ) ಮುಕ್ತಿವಾಸ
ನೀ ತೋರ್ವ ಚೆಲುವಿನಾ ಬಿಂದು ಚಿಂತಾಮಣಿಯು
ನೀನಭಯಕರ; ನಾನು ಚಂದ್ರಹಾಸ.
....ಕಾಯೆನ್ನ, ನೀ ಭೂಮ, ನಾನು ಅಲ್ಪ."

ಹೀಗೆ ಹೇಳುವುದು ನಿಜವಾದ ಅರಿವು ಮೂಡಿದ ಮೇಲೆ. ಅರಿವು ಮೂಡಿದವನು ಜ್ಞಾನಿ. ಜ್ಞಾನಿ–ಆಳ್ವಾರ, ಮುಕ್ತಜೀವಿಗಳು ಇವು ಏಳನೆಯ ಗುಂಪಿನ ಕವನಗಳು.

"ಯಾವ ಕಾಲಕು ಸತ್ಯವೆಂದೊಂದು ಸಂಗತಿಯನೊಂದು ಪದವ
ನಿಲ್ಲಿಸುವ ಮಾನವಗೆ ಚಿರಜೀವಿ ಪಟ್ಟವಿದೆ
ಶೂನ್ಯದಾಲಯು ತೆರೆಯೆ ತನ್ನ ಕದವ.
....ಜ್ಞಾನ ಸಾಧನವಹುದು ನಮ್ಮ ಧರ್ಮ.
....ನಿನ್ನ ಕರ್ಣವು ಬೆಳಕು, ನಿನ್ನ ವರ್ಣವು ಬೆಳಕು
ನಿನ್ನ ಹೃದಯದಿ ಬೆಳಕು ತುಂಬಿ ಬೆಳಕು."

ಹೀಗೆ ಕಾಂಬುವನು ಜ್ಞಾನಿ. ಅವನೆ ಆಳ್ವಾರ, ಅವನೇ ಮುಕ್ತ ಜೀವಿ.

"ಮುಕ್ತ ಜೀವಿಗಳಿವರು ಮುಗಿಲಿನಲಿ ಸಂಚರಿಸಿ
ಮೂಜಗವ ಸಲಹುವರು ಹಗಲು ರಾತ್ರಿ
ಇವರ ಪ್ರೀತಿಯೆ, ಇವರ ಕಾರುಣ್ಯವೇ ಬೆಳಕು
ಅದರ ಸುಳಿವನೆ ಹಿಡಿವಳೀ ಧರಿತ್ರಿ–

“ ಬಾಳದೇಗುಲದಲ್ಲಿ ಚಿರಸನಾತನರಿವರು.
ಬಾಳ್ಮೊದಲ ಬಲ್ಲವರು. ಬಹು ಪುರಾತನರು.
ಹೀಗಿದ್ದು ಯುಗಯುಗಕೆ ಸಿಗುವ ಸನ್ನಿಧಿಯಿವರು
ಸಂಕ್ರಾಂತಿ ಪುರುಷರೈ, ನಿತ್ಯನೂತನರು.”

‘ ಮಂಗಳಾಷ್ಟಕ ’ದಿಂದ ಮಹಾಕಾವ್ಯವನ್ನು ವಿನಾಯಕರು ಮುಗಿಸಿದ್ದಾರೆ.

“ ಕಾವ್ಯ ವಿಶ್ವವ್ಯಾಪಿ. ಜೀವ ಗಗನ ಚುಂಬಿ. ಓಂ ನಮೋ ”

ಎಂದು. ಮಗುವಿನ ಅವತಾರದಿಂದ ಮುಕ್ತಿಜೀವಿಯ ವರೆಗೆ ಜೀವನದಲ್ಲಿಯ ವಿವಿಧ ಅವಸ್ಥೆಗಳನ್ನು ತೋರಿ, ಬಾಳದೇಗುಲದಲ್ಲಿ ಬದುಕುವವರು ಎಲ್ಲ ಅವಸ್ಥೆಗಳನ್ನು ತಿಳಿದಿರಬೇಕು. ಮುಕ್ತಿಜೀವಿಯಾಗಬೇಕು, ಎಂದು ಸಾರಿದ್ದಾರೆ.

‘ ಉಗಮ ಎಂಬುದು ೧೯೫೫ ರಲ್ಲಿ ಪ್ರಕಟವಾದ ಕವನ. ಇದರಲ್ಲಿ ಹದಿನಾರು ಅಧ್ಯಾಯಗಳಿವೆ. ಈ ಕವನಕ್ಕೆ ಆಸ್ಪದವಾದ ಸನ್ನಿವೇಶವು ೧೯೪೯ ರಲ್ಲಿಯೆ ನಡೆಯಿತು. ಮಹಾಬಳೇಶ್ವರದಲ್ಲಿ ನಡೆದ ಐದು ದಿನಗಳ ಸಮ್ಮೇಲನದಲ್ಲಿ ಭಾಗಿಯಾಗಲು ವಿನಾಯಕರು ಹೋದಾಗ ಅಲ್ಲಿನ ಪರಿಸರವು ಮಾಡಿದ ಪರಿಣಾಮದಿಂದ ಈ ಕವನವು ಸ್ಫೂರ್ತಿ ಪಡೆಯಿತು. ಮಹಾಬಳೇಶ್ವರವು ಗುಡ್ಡದಲ್ಲಿಯ ಊರು. ವಿರಾಮಸ್ಥಾನ. ನಿಸರ್ಗ ಸೌಂದರ್ಯದ ಆಗರ. ಒಂದೊಂದೆಡೆ ನೋಡಿದರೆ ಒಂದೊಂದು ವಿಧ. ಎಲ್ಲವೂ ಒಂದೇ ತೆರನಾದ ಆಘಾತ ಮಾಡಿಮವು. ಕವಿ ಹೃದಯವರಳಿತು. ಹದಿನಾರು ಟಿಸಿಲಾದ ಹೂವಾಯಿತು. ಅದೇ ಉಗಮವು. ಈ ಕವನದ ಬಗ್ಗೆ ಅರ್ಪಣದಲ್ಲಿ ಹೇಳಿದ ಮಾತುಗಳು ಓದುಗರಿಗೆ ಮಾರ್ಗದರ್ಶನ ಮಾಡುವುವು.

“ ಇಗೋ ಈ ಪುಷ್ಪಮಂಜರಿಯನ್ನು ಸ್ವೀಕರಿಸು.
ಇವುಗಳಲ್ಲಿ ಕೆಲವಾದರೂ ನಿನಗೆ ಕಂಪುಳ್ಳವು.
ಉಳಿದವುಗಳಲ್ಲಿ ಇಂಪಾದರೂ ಇರಬಹುದಲ್ಲ !
....ಇಲ್ಲಿರುವುದು ಮುಕ್ತ ಛಂದ.
....ಹೃದಯವು ಹಾಕಿದ್ದೇ ತಾಳ, ಅದು ಹಾಡಿದ್ದೇ ಸಂಗೀತ

ಅದು ಬರೆದದ್ದೇ ಕಾವ್ಯ. ಇಲ್ಲಿ ಈ ಕವನದುದ್ದ ಹೃದಯದ ಮಿಡಿತ ವಿದೆ. ಅದು ಕನಸನ್ನು ಮುಡಿದಿದೆ. ಕಂಬನಿ ಮಿಡಿದಿದೆ; ದುಃಖ ವನ್ನು ತುಡಿದಿದೆ ಹಿರಿಯಾಸೆಯನ್ನು ಹಿಡಿದಿದೆ."

ಕವನವು ವಿಹಂಗಮ ನೋಟದಿಂದ ಪ್ರಾರಂಭವಾಗುವುದು. ಸುತ್ತಲೂ ಕಣ್ಣಾಡಿಸಿದಾಗ ಕಾಂಬುವ ನಿಸರ್ಗದ ರಮಣೀಯ ಶೋಭೆಯು ಕೂಡಲೆ ಮನವನ್ನಾಕರ್ಷಿಸುವುದು. ಹಸಿರು, ಹೂ, ಹುಲ್ಲು, ನೀರು. ಗಿರಿಕಂದರ, ಎಲ್ಲವೂ ಚೆಲುವು.

"ಚೆಲುವಿನೊಳಗೆ ಚೆಲುವು.
ಚೆಲುವಿನೊಳಗೆ ಧುಮುಕಿ ಸತ್ಯವನ್ನು ಕಾಣು
ಚೆಲುವಿನೊಳಗೀಸಿ ಮಂಗಳವನ್ನರಸು
ಏಳು ! ಸಿದ್ಧನಾಗು.'

ಈ ಚೆಲುವಿನ ಮೂಲವನ್ನು ಬಲ್ಲೆಯಾ; ಸೃಷ್ಟಿಯ ಉಗಮವನ್ನು ಬಲ್ಲೆಯಾ ? ಇದು ನೂತನ ಪುರಾಣವಾಗಿದೆ. "ಪೃಥ್ವಿಯನ್ನು ಸೃಷ್ಟಿಸಿದ ಬ್ರಹ್ಮ. ಪೃಥ್ವಿ ಸ್ವಗತ ತೃಪ್ತನಾಗಿ ಸ್ವಾಭಿಮಾನ ಪೂರಿತವಾಗಿ ಬೆಳೆಯಿತು. ಗಗನ ಚುಂಬಿಯಾಗಿ ತಲೆಯೆತ್ತಿತು. ತಡೆಯೆಂದರೆ ತಡೆಯಲಿಲ್ಲ. ಗಾಳಿ-ನೆಲಗಳ ಗುದ್ದಾಟ ಗತಾನುಗತಿಕವಾಗಿ ನಡೆದು ಕಾಲನು ತೆರೆಯೆತ್ತಿದಾಗ ವಾಯುವಿನ ರೊಂಯ್ಗುಣಿತ ಮರೆಯಾಗಿತ್ತು....ಪಂಚಭೂತಗಳು ಸಂಚಯಿಸಿ ಸಂಭವಿಸಿದ ಸಂಗಮವೇ ಜೀವನ....ಪಂಚಭೂತಗಳ ಸಂಗಮವನ್ನು ಪಂಚನದಿಗಳ—ಸರಸ್ವತಿ, ಕೊಯಿನಾ, ವೆಣ್ಣಾ, ವಾರಸಾ, ಕೃಷ್ಣಾ—ಉಗಮವಿದು ಸಾರಿತು.....ಅಪೌರುಷೇಯ ಕೃತಿಯನ್ನು ಬಾ ನೋಡಲು, ಎಂದು ಬ್ರಹ್ಮನ ಮಾನಸ ಪುತ್ರನನ್ನು ಮನಸೋಕ್ತವಾಗಿ ಕರೆಯಿತು" ಮಾನವನು ಒಂದು ಚೆಲುವನ್ನು ಕಂಡ. "ಕಲ್ಪಕತೆಯ ಕಲ್ಪಲತೆಯಲ್ಲಿ ಒಂದೊಂದೇ ಕಲ್ಪವರಳಿತು.—ಇದೆಲ್ಲ ಭಾರತಕ್ಕಿಂತ ಸನಾತನ" ಎಂದು ಹೇಳಿದ ಮಾತಿನಲ್ಲಿ ಭೂಮಿಯ ಇತಿಹಾಸವೇ ಹುದುಗಿದೆ. ಗೋದಾವರೀ ನದಿಯ ದಕ್ಷಿಣದಲಿರುವ ಭೂಪ್ರದೇಶವು ಒಂದು ದ್ವೀಪವಾಗಿತ್ತು. ಇಂದಿನ ಭಾರತ ಅಂದು ಇದ್ದಿಲ್ಲ. ಇಂದು ಭಾರತವು ದ್ವೀಪಕಲ್ಪ. ಹಿಮಾಲಯ ಪ್ರದೇಶವು ನೀರಿನಲ್ಲಿ ಇದ್ದಿತು. ಅದು ಮೇಲೆ ಎದ್ದು ಬಂದಾಗ ಇಂದಿನ ಭಾರತ

ರೂಪುಗೊಂಡಿತು. ಗಂಗಾನದಿ ಹಿಮಾಲಯದ ಉದಯವಾದ ಮೇಲೆ ಉದಯವಾದ ನದಿ. ಅದು ಕಾಲಾಂತರದಲ್ಲಿ ಮಹತಿ ಪಡೆಯಿತು. ನೀರು ಗಂಗೆ. ಗೋದಾವರಿಗೆ ಇಂದಿಗೂ ವೃದ್ಧಗಂಗಾ ಎಂಬ ಹೆಸರು ಇದೆ.

ಇಂತಹ ಪುರಾಣ ಕಾಲದ ಪ್ರದೇಶವಿದು ಚೆಲವಿನ ಭೂಮಿಯಾಗಿದೆ. ಶೃಂಗಗಳ ಶ್ರೇಣಿ ನೋಡಿ ಮಾನವ ಅಚ್ಚರಿಬಟ್ಟ. ಹೀಗೆ ಆಯೆಂದು ಬಾಯಿ ತೆಗೆದು ನಿಂತು ನೋಡಲು ಮೀಸಲಾಗಿಟ್ಟ ಸ್ಥಳವು 'ಆರ್ಥರ ಆಸನ.' ಅಲ್ಲಿಂದ ತೋರಣಗಡ, ಕಮಲಗಡ, ರಾಯಗಡ, ಪುರಂದರಗಡ, ಸಿಂಹಗಡಗಳು ಕಾಣುತ್ತಿವೆ. ಪರ್ವತಾವಳಿಗಳಿಗೆ ನೆಲಸೇತುವೆ ಇದೆ. ಮಾನವನು ಸಾಹಸಿಯಾಗಿ ಬೆಳೆದ ಕತೆ ಹೇಳುವುವು ಈ ಕೋಟೆಗಳು. ಕೃಷ್ಣೆಯ ಉಗಮವನ್ನು ಕಾಣಬೇಕೆಂದು ಬಯಸಿದನು ಮಾನವನು. ಬುದ್ಧ ಭೀಕ್ಷು, ವೀರ, ಹರದ, ಕಾರ್ಮಿಕ ಹೀಗೆ ನಾಲ್ವರು ನಾಲ್ಕು ಮಾದರಿಯ ಪ್ರತಿನಿಧಿಗಳಾಗಿ ಉಗಮ ಹುಡುಕಲು ಹೊರಟರು. "ಒಬ್ಬರೊಬ್ಬರ ಉಗಮ ಒಂದೊಂದು ದೃಷ್ಟಿಯಲ್ಲಿ ಅವರವರ ಉಗಮವನ್ನು ಕಾಣಲು ಆವರವರು ಆತುರರಾಗಿದ್ದರು." ಕಂಡಿತು ಕೃಷ್ಣೆಯ ಉಗಮ. "ಧೋ ಧೋ ಎಂದು ಬೆಳ್ಳಿಯಂತಹ ನೀರು....ಒಂದು ಕಿಂಡಿಯೊಳಗಿಂದ ಹರಿಯುತ್ತಿತ್ತು. ಮತ್ತೆ ಪರ್ವತದೆದೆಯನ್ನು ಹೊಕ್ಕು ಅದರಡಿಯತ್ತಣಿಂದ ಸಾಗರವರೆದಿತ್ತು....ಹೀಗೆ ಪ್ರಕೃತಿ ಪ್ರಾಣಮಯತೆಯ ಚೆಲುವನ್ನು ಮಾನವನ ಮನೋಮಯತೆ ಕಂಡು ಹಿಡಿದು ನಿಸರ್ಗ ರಮಣೀಯತೆಗೆ ಮುಕುಟವಿಟ್ಟಿತು. ಜೀವನ ವಿಕಾಸಕ್ಕೆ ದಾರಿಮಾಡಿ ಕೊಟ್ಟಿತು" ಚಾಲುಕ್ಯರ ಕಾಲದಿಂದ ಶಿವಾಜಿಯ ಕಾಲವವರೆಗಿನ ಇತಿಹಾಸ ಇಲ್ಲಿ ಕಾಣುತ್ತದೆ. "ಶಿವರಾಯ ಸಹ್ಯಾದ್ರಿರಾಯ" ಆಧುನಿಕ ಕಾಲದ ಇತಿಹಾಸವೂ ಇದೆಯಿಲ್ಲಿ. "ಆಂಗ್ಲರಾಳಿಕೆಯಲ್ಲಿ ಆರೋಗ್ಯ ನಿಕೇತನ ವಾಯಿತು ಈ ತಾಣ. ಯಾರಿಗೆ—ಆಳರಸರಿಗೆ." ಭಾರತೀಯನು ಇದನ್ನು ನೋಡಿ ಸಂತಸಬಡುವ ಕಣ್ಣು ಕೂಡ ಕಳೆದುಕೊಂಡಿದ್ದನು. ಆಂಗ್ಲರು ಹೊಸ ಕಣ್ಣು ಕೊಟ್ಟರು. "ಆದರೆ ಶಸ್ತ್ರಕ್ರಿಯೆ....ಕ್ರೂರವಾಗಿತ್ತು." ಉಗಮದ ನೀರು ಅಮೃತ. "ಅನಂತ ನಿಧಿಯದು....ಎಲ್ಲರನ್ನು ತಣಿಸಿ ಏಕಧಾರೆಯಾಗಿ ಕಡಲೆಡೆಗೆ ನಡೆದ ಪಾವನ ಕೃಷ್ಣೆಯ ನೋಡಿರೆ. ನೋಡಿ ಸಾಷ್ಟಾಂಗವೆನ್ನಿ."

ಚೇತನವನ್ನು ಜಡದಲ್ಲಿಯೂ ಕಾಣುವವನೆ ಕವಿ. ಕಲ್ಲು, ಹುಲ್ಲು, ನೀರು, ಗಿರಿ-ಕಂದರ ಒಂದೊಂದೂ ಒಂದೊಂದು ಮಾತು ಹೇಳುತ್ತವೆ. ಕವಿಯು ಅದನ್ನೆಲ್ಲ ಹೊಂದಿಸಿ, ಒಂದು ರಾಗವಾಗಿ ಹೇಳುತ್ತಾನೆ. ಒಂದೆಡೆ ನೋಡಿದಾಗ ಉದಾತ್ತ ಗಂಭೀರ ಸ್ಫೂರ್ತಿಯುತ ಇತಿಹಾಸ ಕಾಣುತ್ತದೆ. ಇನ್ನೊಂದೆಡೆಗೆ ನೋಡಿದಾಗ ಮೊದಲಿನದಕ್ಕೆ ಹೊಂದದ 'ವಿಷಮ ವಾತಾವರಣ' ಕಂಡುಬರುತ್ತಿದೆ. ''ಮೂರುದಿನ ಮೋಜಿಗೆ ಬಂದವರು ರಮ್ಯಸ್ಥಾನವನ್ನು ಕೊಂಡಾಡುವರು. ಆದರೆ ಅಲ್ಲಿಯ ರಹಿವಾಸಿಗಳು—ಅವರ ಗತಿಯೇನು?....ಆವರಣದ ತಿಮಿರ ದವಡೆಗಳಲ್ಲಿ ಸಿಕ್ಕು ಅಸಹಾಯತೆಯಲ್ಲಿ ಇಲ್ಲಿಯೂ ನರಪ್ರಾಣಿ ಒದ್ದಾಡುತ್ತಿದೆ. ಸಾವಿಲ್ಲದೆ ಬೇರೆ ವಿಮೋಚನೆ ಇಲ್ಲವೇನೋ ಎಂದು ನರಳಾಡುತ್ತಿದೆ. ''ಇಂತಹರು ಇಲ್ಲಿಯ ಸೌಂದರ್ಯವನ್ನು ಹೇಗೆ ಸವಿದಾರು? ಬದುಕಿ, ಬಾಳಿ-ಸುಖ ಬಾಳಿದಾಗ ಬಾಳಿನಂದ, ನಿಸರ್ಗದ ಚೆಂದ. ''ದೆಸೆಗೆಟ್ಟ ಈ ಕಣ್ಣಿಗೆ ಸೌಂದರ್ಯವೆಲ್ಲ ಸ್ಮಶಾನವಾಗಿದೆ. ಹಸೆಗೆಟ್ಟ ಈ ಜೀವಕ್ಕೆ ಕ್ಷೇತ್ರವೆಲ್ಲ ನರಕವಾಗಿದೆ.....ಉಗಮವು ಅಗಮ್ಯವಾಗಿದೆ. ಇದು ಜೀವನವೆ? ಇದು ಸ್ವಾತಂತ್ರ್ಯವೆ? ಇದು ಸ್ವರಾಜ್ಯವೆ?"

ಮಾನವನು ಹೀಗಾಗಬೇಕೆ? ಈ ಮಾನವನ ಪರಂಪರೆ ಎಷ್ಟು ದೊಡ್ಡದಿದೆ. ''ರಾಮಚಂದ್ರ ನನ್ನ ಮುತ್ತಾತ. ಬುದ್ಧ ನಿನ್ನ ಮುತ್ತಯ್ಯ. ಕೃಷ್ಣ ತೀರ ಸಮೀಪದ ಆಪ್ತ. ತುಕಾರಾಮ ನಿನ್ನ ಬಂಧು. ಎಲ್ಲ ವೀರರ ಜೀವ ದುಸಿರೇ ನೀನು ಉಸಿರಾಡಿಸುವ ಹವೆ. ಷೋಡಶ ಚಕ್ರವರ್ತಿಗಳ ತಾಯಿಯೇ ನಿನ್ನ ತಾಯಿ. ಇಷ್ಟೆಲ್ಲವಿದ್ದು ನಿನಗೇಕೆ ಈ ಕಷ್ಟ?....ಏನಿದು ವಿಪರೀತ.... ಪದಚ್ಯುತ ಸಮ್ರಾಟನಂತೆ ಕಾಡಿನಲ್ಲಿ ಅಂಡಲೆಯುವ ಮಗುವೆ. ಮನುಕುಲದ ಮನುವಾಗಿ ಬಾಳು. ಕುಲೋದ್ಧಾರಕನಾಗು" ಎಂದು ಹಿಂದಿನ ಸ್ಥಿತಿ ನೆನವಿಗೆ ತಂದು ಮುಂದೆ ತಲೆಯೆತ್ತುವ ಹಾಗೆ ಆಗಲಿ—ಆಗಬೇಕು ಎನ್ನುವರು. ಆದರೆ ಯಾವ ಸ್ಥಿತಿಗೆ ಬಂದು ಮುಟ್ಟಿರುವೆವು ಎಂಬುದನ್ನು 'ಮೊಲೆಗೂಸಿನ ತಾಯಿ' ತೋರುವಳು. ''ದೇಗುಲದ ಬಳಿಯಲ್ಲಿ ಮೊಲೆ ಹರಿಯುವ ಮಗು ಹಿಡಿದುಕೊಂಡು ಕಾಸಿಗೆಂದು ಕೈಯೊಡ್ಡುವ ತಾಯಿ. ಸ್ತ್ರೀ ಜಾತಿಯ ಗತಿ ಇಲ್ಲಿಗೆ ಬಂತೆ? ಮಹಾಮಾತೆ ಭಿಕಾರಿಯಾದಳೆ? ದೇವ ಸನ್ನಿಧಿಯಲ್ಲಿ ಇದೆಂತಹ ಸನ್ನಿವೇಶ? ಇಲ್ಲಿ ದೇವರು ಇಲ್ಲ. ಆ ಭಿಕ್ಷುಕಿಯೇ ದೇವರು....

ಮೈಯ್ಯದು ಎಲುಬಿನ ಗೂಡು. ಮೊಲೆಯದು ಬರಿ ಗಂಗೆದೊಗಲು....ಇದು ಯಾರ ತಪ್ಪು ಈ ಶೃಂಗಾರದ ಹೊಲೆತನ. ನಿನ್ನದೋ ಪುರುಷನದೋ. ಪ್ರಕೃತಿ ಸಹಜವಾದ ಕಾಮುದ್ದೋ?....ಆದರೆ ಇಂಥ ಪ್ರಮಾದ ನಡೆದ ಸಮಾಜವೆಂಥ ಸಮಾಜ. ನಾಡೆಂಥ ನಾಡು. ಈ ಭಿಕ್ಷುಕಿಯ ಕಂಡು ಭಾರತ ಮಾತೆಯನ್ನು ನೆನೆಸಿದೆ. ಫಲವತ್ತಾದ ಆರ್ಯ ಭೂಮಿಯಲ್ಲಿ ನದಿ-ನದಿಗಳು ತುಂಬಿ ಹರಿಯುವ ನಾಡಿನಲ್ಲಿ ಮಣ್ಣು ಹೊನ್ನಾಗುವ ನೆಲದಲ್ಲಿ ತಿನ್ನಲು ಅನ್ನವಿಲ್ಲ.....ಈ ಸಮಸ್ಯೆಗೆ ಉತ್ತರವೆಲ್ಲಿ?'' ಭಾರತದ ಈ ಸ್ಥಿತಿಯ ಬಗ್ಗೆ ವಿಚಾರ ಮಾಡುವುದು ಯೋಗ್ಯವಲ್ಲವೆ? ವಿಚಾರ ಮಾಡಲು ಸಮಸ್ಯೆಗಳಿಗೇನು ಕಡಿಮೆ ಎಂದು ಸಾರುವ ಹಾಗೆ ಇದ್ದ "ಸಾಧು." ಸಾಧನೆ ಮಾಡಿದವನೇನೋ ನಿಜ. ಆದರೆ ಸಾಧನೆಯಿಂದ ಬದುಕಲಾಗಲಿಲ್ಲ. "ಬಂದ ಯಾತ್ರಿಕರಿಗೆ ಸಂದ ಸ್ಥಳಗಳನ್ನು ತೋರಿಸಿ, ಅವರು ಕೊಂಚ ಹಣವಿತ್ತರೆ ಕೈಯೊಡ್ಡಿದ. 'ಮಾರ್ಗ'ದರ್ಶಕನಾಗದೆ ಅನ್ಯಮಾರ್ಗವಿರಲಿಲ್ಲ....ಅನುಭಾವಿಯಾಗ ಬಯಸಿದವ ಗೈಡ್ ಆಗಿ ಬದುಕಬೇಕು.........ಓ ಸಮಾಜ ವ್ಯಕ್ತಿ ಬರಿ ಕೂಲಿಯಾಳಲ್ಲ....ಹೊರತಳ್ಳಿದ ಧ್ಯಾನಿಗಳನ್ನು ಬರಮಾಡಿಕೊಳ್ಳು .... ಸಾಧಕರ ತಪೋವನವಾಗಿ ಅಧಿಮಾನವನ ತೂಗುದೊಟ್ಟಿಲಾಗು ಓ ಸಮಾಜ!'' ಸಾಧಕನಾಗಬೇಕೆಂದವನ ಸ್ಥಿತಿ ಹೀಗೆ. 'ಪೂಜಾರಿ' ಹೇಗಿದ್ದಾನೆ? "ಯಾರ ಪೂಜೆ ಹೇಗಾಗಬೇಕೋ ಅಂತೆ ಸಾಗುತ್ತಾನೆ." ಇಲ್ಲಿನ ನಿಸರ್ಗ ಸೌಂದರ್ಯವೇ ದೇವಾಲಯವೆಂದು ಅವನಿಗೆ ತಿಳಿಯದು. "ಒಂದು ಮಾತ್ರ ಅವನಿಗೆ ಗೊತ್ತು. ಯಾತ್ರಿಕರು ತನ್ನ ಸಂಸಾರ ರಥವನೆಳೆವರೆಂದು....ಸ್ವಯಂಭೂ ಲಿಂಗದಲ್ಲಿ ಬಿಟ್ಟ ಐದು ಬಿರುಕುಗಳನ್ನು ಗುರುತಿಸಿ ಇವು ಐದು ನದಿಗಳ ಉಗಮ. ಅಂತೆ ಸ್ಥಾನ ಪವಿತ್ರತಮ, ಎಂದು ಸಂಶೋಧಿಸಿದ. ತನ್ನನ್ನೇ ತಾನು ವಂಚಿಸಿಕೊಂಡು ಬಂದವರನ್ನೆಲ್ಲ ವಂಚಿಸಿದ ...." ಈ ಪೂಜಾರಿಗೂ ವಿಶ್ರಾಂತಿಗೃಹದಲ್ಲಿಯ ಬಟ್ಲರನಿಗೂ ಏನು ವ್ಯತ್ಯಾಸ? "ನೂಲೆಳೆಯಿಂದ ಕೊರಳು ಕತ್ತರಿಸಿದಂತೆ ಬಟ್ಲರನು ಹಣವೆತ್ತಿದರೆ, ನೂಲೆಳೆ ಧರಿಸಿ ನೀನೂ ಅದೇ ಹವಣಿನಲ್ಲಿರುವಿ? ಅಸುರೀ ಸಮಾಜದ ಅರೆ ಒಕ್ಕಲು ನೀವು, ಎಂಬ ತಿಳಿವು ಅಂಕುರಿಸುವುದೆಂದು?

ಹಿಂದೊಮ್ಮೆ ನಂದನ ವನವಾದ ಭಾರತದ ಹಿರಿ ನೆಲದಲ್ಲಿ ಮನಬಂದತ್ತ ಮನಸೋಕ್ತವಾಗಿ ಕಾಡುಬೀಜಗಳು ಬಿತ್ತಿಕೊಂಡಿವೆ. ಹಸನ

ಗೈಯುವ ಸಾಹಸಿಗನಾರು? ಸಾಂಘಿಕ ಜೀವನವಿದೆ. ಆದರೆ ಸಂಘ-ಸಂಘ ಗಳು ಮರಣಾಂತಿಕ ಕದನವೆಸಗಿವೆ. ಕಾಲಕೂಟ ವಿಷದಂತೆ ಜೀವನದಲ್ಲಿ ಕೂಟಗಳು ಬೆರೆತಿವೆ. ವಾದವಾದಗಳಲ್ಲಿ ಸಂವಾದವೇ ಸಂಪುಷ್ಟಕ್ಕಿಟ್ಟಿದೆ. ಸರ್ವೋದಯವೂ ವಾದಗ್ರಸ್ತವಾಗಿ ವಿವೇಕವೇ ಅಸ್ತವಾಗಿದೆ. "ಹೀಗಾಗಿದೆ ನಮ್ಮ ದೇಶ." ಇದು ದೇಶವೇ?....ಕೊಂಡವಾಡ. ಇದು ರಾಷ್ಟ್ರವೇ? ರಾಷ್ಟ್ರದ ವ್ಯಂಗ್ಯ ಚಿತ್ರ. ಇದೆಲ್ಲಿಯ ರಾಷ್ಟ್ರ! ದಾರಿಹೋಕರ ಪುಪ್ಫುಸಗಳಲ್ಲಿ ಕ್ಷಯ ರೋಗವನ್ನು ತುಂಬುವ ಮೋಟರೊಡೆಯನಿಗೆ ಹೇಳು ಇದು ರಾಷ್ಟ್ರವೆಂದು! ಬಡವರನ್ನು ಬೇಟೆಯಾಡಿ ಬೊಕ್ಕಸವನ್ನು ಕಿಕ್ಕಿರಿ ತುಂಬುವ ಹರದನಿಗೆ ಹೇಳು-ಇದು ರಾಷ್ಟ್ರವೆಂದು! ಬಾಳುವೆಯೆಂದರೆ ಬೇಟೆಯ ಮೊಲನಾಗಿಸಿ ಜನಕೆ ಪ್ರತಿ ಶಕುನಿಯಾದ ಅಧಿಕಾರಿಗೆ ಹೇಳು ಇದು ರಾಷ್ಟ್ರವೆಂದು! ಪಟ್ಟ ಕಷ್ಟದ ಕಿರಿಯುಸಲಿನ ಮೇಲೆ ಚಕ್ರಬಡ್ಡಿಯ ವ್ಯವಹಾರ ಮಾಡುವ ದೇಶ ಭಕ್ತನಿಗೆ ಹೇಳು ಇದು ರಾಷ್ಟ್ರವೆಂದು! ಹಿಂಡು ಜನರನ್ನು ಹಿಡಿದು ತಂದು ಆರಿಸಿ ಬಂದು ಪುಂಡಗಲಿಯಂತೆ ಮೆರೆಯುವ ಚುನಾಯಿತನಿಗೆ ಹೇಳು ಇದು ರಾಷ್ಟ್ರವೆಂದು! ಹಳ್ಳಿಗರ ಅಜ್ಞಾನ ತೈಲದಲ್ಲಿ ತಮ್ಮ ಗುಳ್ಳೋರಿಗೆಯನ್ನು ಕರಿಯುವ ಗೌಡ, ಶಾನಭೋಗರಿಗೆ ಹೇಳು ಇದು ರಾಷ್ಟ್ರವೆಂದು! ಒಪ್ಪಿ ಕೊಳ್ಳದೆ ಗತಿಯಿಲ್ಲ! ಇದು ನಮ್ಮ ರಾಷ್ಟ್ರ." ಈ ರಾಷ್ಟ್ರದ-ಇಂತಹ ಹೀನ ಸ್ಥಿತಿಗೆ ಇಳಿದ ರಾಷ್ಟ್ರದ ಉದ್ಧಾರಕನು ಇಂದಿನ-ನಾಳಿನ ಯುವಕರು ಅವ ರಲ್ಲಿ ಸಂಕಲ್ಪ ಉದಯವಾಗಿದೆ. ಆದರೆ ವಿಘ್ನಗಳಿವೆ! ವಿಘ್ನವಿಲ್ಲದೆ ಜೀವನ ವಹುದೆ?" ತರುಣ, "ನೀನು ನಮ್ಮ ಆಸೆ, ರಾಷ್ಟ್ರದ ಹಿರಿಯಾಸೆ, ಶುಭಾಸ್ತೇ ಪಂಥಾನಃ" ಓ ತರುಣ, ಎದ್ದೇಳು, ನಿನ್ನ ರಾಜ್ಯವನ್ನಾಳು. ಎಲ್ಲರೆದೆಯ ಹೊಂಗನಸು ನೀನು. ಈ ಯುಗದ ಧನ್ವಂತರಿಯಾಗು; ಎಲ್ಲ ಅನ್ಯಾಯ ದೊಡನೆ ಯುದ್ಧ ಸಾರು. ಕಿತ್ತೊಗೆ ಎಲ್ಲ ಜಾತಿಮತಗಳ ಬೇರು. ನೂತನ ಜಗದ ನಿರ್ಮಾತೃನಾಗು ನವ ರಾಷ್ಟ್ರದ ಹರ್ಷವರ್ಧನನಾಗು."

'ಉಗಮ' ಎಂಬುದು ಕೃಷ್ಣಾನದಿಯ ಉಗಮ. ಅದನ್ನು ನೋಡಲು ಬಂದಾಗ ರಾಷ್ಟ್ರದ ಉಗಮ-ಉದಯ-ಅಭಿವೃದ್ಧಿಯ ಕಲ್ಪನೆ ಬಂತು. "ಕೊನೆಯ ದರ್ಶನಕ್ಕೆಂದು ಕೃಷ್ಣೆಯ ಉಗಮಕ್ಕೆ ಬಂದೆ. ನಾಡಿನ ಭೀಕರ ದೃಶ್ಯವೆಲ್ಲ ಕಣ್ಣೆದುರು ಸುಳಿದಿತ್ತು. ಕೃಷ್ಣೆಯ ಉಗಮ ಹೊಸ ಜಗದ

ನಿಗವಾಗವು ಮತ್ತೆ ನಿನ್ನ ಉಗಮವನ್ನು ನೋಡುವ ಭಾಗ್ಯ ದೊರೆತರೆ ಜೀವ ದೇವನಾದಾನು.''

ಇದು ಉಗಮದ ಪರಿ. ಕವಿಯ ಪರಿ. ಕಣ್ಣಿಗೆ ಬಿದ್ದ ಸಂಗತಿಯು ಒಂದಾದರೆ ಕಣ್ಣಿಗೆ ಬೀಳದೆ ಇದ್ದ ಸಂಗತಿಗಳು ಕಲ್ಪನೆಯಿಂದ-ವಿಚಾರದಿಂದ ಉಗಮ ಹೊಂದಿ ಹರಿದು ಹೊಸಲಾಗಿ ಕಂಡು, ಇಂದಿನ–ಮುಂದಿನ ಜೀವನದ ಪಾಠಗಳನ್ನು ಒದಗಿಸುವುದು. ಅದಕ್ಕೆ ಕವಿಯ ದೃಷ್ಟಿ ದಾರ್ಶನ ದೃಷ್ಟಿಯೆಂದು ಹೇಳುವುದು.

ಸದ್ಯಕ್ಕೆ ಕೊನೆಯದಾದ ಕಾವ್ಯ ಪ್ರಕಟನೆಯು ವಿನಾಯಕರ 'ದ್ಯಾವಾ ಪೃಥಿವೀ.' The poet's eye doth glance from Heaven to earth, from earth to eaven. ಎಂದು ನುಡಿದ ಶೆಕ್ಸಪಿಯರನ ಸಾಲುಗಳು ನೆನಪಿಗೆ ಬರುತ್ತವೆ. ಈ ಪುಸ್ತಕದಲ್ಲಿ ಎರಡು ಭಾಗ: ನೀರದ. ಈಗ ಕವಿಯು ನೆಲದಿಂದ ಮುಗಿಲಿಗೆ ನೋಡಿದ್ದಾನೆ. ಇನ್ನೊಂದು ಇಳಾಗೀತ. ಈಗ ಕವಿಯು ಮುಗಿಲಿನಿಂದ ನೆಲವನ್ನು ಕಂಡಿದ್ದಾನೆ. ಈ ಎರಡು ನಿಲುವುಗಳಿಂದ ಕಂಡ ಚೆಲುವು, ಭಾವನೆ, ವಿಚಾರ ಲಹರಿಗಳು ಇಲ್ಲಿ ರೂಪುಗೊಂಡಿವೆ. ''ವಿನಾಯಕರ 'ನೀರದ' ಬಹುರೂಪಿಯಾಗಿ ಚಿತ್ತರಂಜನೆ ಮಾಡುವನಲ್ಲದೆ ನಾರದನಂತೆ ದಿವ್ಯ ಸಂದೇಶವನ್ನು ಬಿತ್ತರಿಸುತ್ತಾನೆ." ಎಂದು ಮುನ್ನುಡಿಯಲ್ಲಿ ಶ್ರೀ. ಬೇಂದ್ರೆ ನುಡಿದಿದ್ದಾರೆ. ನೀರದವೆಂದರೆ ಮೋಡ–ಮುಗಿಲು ಕ್ಷಣಕ್ಷಣಕ್ಕೆ ರೂಪ ಬದಲಾಯಿಸುವ, ಸ್ಥಳ ಬದಲಾಯಿಸುವ ಸ್ವಭಾವ ಅದಕ್ಕೆ. ಅದು ಕಲ್ಪನಾ ನಿವಾಸಕ್ಕೆ ಎಡೆಮಾಡಿಕೊಡುವುದು. ಯಾರ ಕಲ್ಪನಾ ವೈಖರಿ ಎಷ್ಟು ಮತ್ತು ಹೇಗಿದೆಯೋ ಅದರ ಮೇಲೆ 'ನೀರದ'ದ ಸಂದೇಶವು ಅವಲಂಬಿಸಿರುತ್ತದೆ. 'ನೀರದ' ಕಾವ್ಯವು ಹತ್ತು ಎಸಳುಗಳಾಗಿ ಅರಳಿದೆ.

''ಮೋಡ, ನೀಲಿಮದಾಳದಿ ತೇಲುವ ಓಡ....ಮಲೆನಾಡಿನ ದಟ್ಟಡವಿಯ ಒಡಲಿನಲಿ ಮತ್ತಗಜ ಸಮೂಹ....ಚಿಕ್ಕೆ ಬೆಳಕಿನಲಿ ಅಚ್ಚ ತೇಲುವಾ ಬಿಳಿ ಮುಗಿಲಿನ ಮಾಲೆ....ಮೋಡವಹುದು ವ್ಯಕ್ತಿ. ಏಕಾಕಿ—ಆದರೂ ವಿವೇಕಿ. ಅದುವೇ ನೀರದ. ಅದುವೇ ನಾರದ....ಎಲ್ಲವು ನೀಲಿಮದೊಡಲು

ತಂಗಿತ್ತು.—ಕರಿ ಮೋಹದ ಹಿಂಡು. ದುರ್ಗಾಮಾತೆಯ ವಾಹನದೊಲು ಮೆರೆದು ಆಯಾಲನು ಕೊಡವಿ ಮುನ್ನಡೆದಿಹುದೀ ಪಂಚಾನನ ಮೇಘ ಮರಿಗಳ ಮೈದಡವಿ" ಒಮ್ಮೆ ವರಾಹದಂತೆ, ಶೃಗಾಲದಂತೆ, ತಿಮಿಂಗಲದಂತೆ, ಏಡಿಯಂತೆ, ಸರ್ಪದಂತೆ ಹುಲಿಯಂತೆ ಕಾಂಬುದು. "ಇಂತಿದೆ ನೀರದ ಸೃಷ್ಟಿ. ಭೂಮಿ ವ್ಯೋಮಗಳವಾಳಲು ಬೇಕು. ನಾರದನು ಜ್ವಲ ದೃಷ್ಟಿ. ಇದೇ ನೀರದ-ನಾರದರ ಸೂತ್ರ. ಊರ್ಧ್ವಗತೆ, ಚಲನ, ಧಾರಣ, ಅವತರಣ. ನೆನೆಸಿದ ರೂಪವ ತಳೆವುದು. ನೀರದ, ನಾವ್ ಬಂದೊಲು ಬೇಡಿ. ನಾ ನಿಂತೆನು. ಕಣ್ಣಾಗುತ ನಿನ್ನ ಜೊತೆಗೆ ನೀರದ ವಿಶ್ವವೆಲ್ಲ ಶೂನ್ಯವಾಯ್ತು. ತೀರದ-ತೋರದ. ತಾನೊಂದೇ ಒಂದು. ಆದರೂ ನೂರೊಂದು. ಲೀಲೆಗಾಗಿ ವಿಕಸನವೆಂಬರಿವನಾಂತು ಬಂದು. ಮಾಯೆಯ ಸೋಂಕಿಲ್ಲದಂತೆ ವಿಕೃತಿಯ ಕೊಂಕಿಲ್ಲದಂತೆ ಪಡಿ ನೆಳಲೇ ಕವಿ ನೆಳಲಹ ಅನ್ಯಾಯುವು ಕವಿದಂತೆ. ಸಾತ್ವಿಕ ಭಾವಗಳ ಬೆಳಗಿ ವಿವಿಧ ರೂಪಗಳಲಿ ತೊಳಗಿ ಪೂರ್ಣವಿದರ ಪೂರ್ಣತೆಯನ್ನು ವಿಕಸನ ಪಥದಲ್ಲಿ ತೋರಿ ನೀರದ ತಾ ನಲೆಯುತಿದೆ, ಧ್ರುವಪಥದಲಿ ಕ್ರಾಂತಿ ಬೀರಿ."

"ಆದಿ ಶಕ್ತಿ ಯಾರು? ನನಗವಳನು ತೋರು! ನಭದ ಮಧ್ಯದಿ ನೋಡು. ಅಮರ ಹಾಸಿಗೆ ಹಾಸಿ ಪವಡಿಸಿರುಳದಲ್ಲಿ ಮಂದಾಕಿನಿ. ನಗ್ನ ಸೌಂದರ್ಯದಲಿ ಮುಗಿಲ ಹೂವಿನ ಮೇಲೆ ವಿಮಲ ಜ್ಯೋತಿಯದಾಗಿ ಸಮ್ಮೋಹಿನಿ."

ಈ ಬಗೆಯಾಗಿ ಕಾಂಬ ನೀರದವು. ಬೇರೆ ಬೇರೆ ರೂಪದ ತನ್ನ ಕತೆಯನ್ನು ಹೇಳಿಕೊಳ್ಳುವುದು. ಅದೇ ಇಷ್ವಾಯಣ. ಅದೆ ಮನ್ವಂತರದ ರಾಮಾಯಣ. ಅದನ್ನು ಹೇಳುವುದು ಈ ಕವನ. ಅದೇ ಮೇಲ್ಮೊಗದ ದೃಷ್ಟಿ.

ಇಳಾಗೀತದಲ್ಲಿ ಕೆಳಮೊಗದ ದೃಷ್ಟಿ ಕಾಂಬುದು. ಗಾಳಿಗಡಲಲಿ ಗಾಳಿ ದೋಣಿ ಸಾಗುತಿದೆ. ಗಂಧರ್ವ ಲೋಕಕಿಹ ಮುಗಿಲ ಗಾಡಿ, ಮೇಲಿನಿಂದ ಭೂಮಿಯನ್ನು ನೋಡಿದಾಗ ಕಡಲಲ್ಲಿ ಕೂರ್ಮದಂತೆ ಭೂಮಿ ಚಾಚಿ ಹುದುಗಿ ಕಾಂಬುದು. ವಿವಿಧ ಬಣ್ಣದ ಭೂಮಿ 'ಇಳಕಲ್ಲು' ಸೀರೆಯನು ಕಸೂತಿಯ ಬೆಡಗುಳ್ಳ ಸೀರೆಯನು ಉಟ್ಟಂತೆ ಕಾಣುವುದು. ನದಿ-ನದಗಳು

ನಾಗ ಮಣಿತದ ಮೋಡಿಯಲ್ಲಿ ಕಾಣುವುವು. "ರೈಲಿನೋಪಾದಿಯಲ್ಲಿ ಡೊಂಕು ಗಣಿತ. ತಂಗೊಳಗಳು ಮುಗಿಲ ದರ್ಪಣಿಸಿಹವು." ಆಕಾಶದಲ್ಲಿ ಸಾಗುವ ವಿಮಾನದ ಜತೆಯಲ್ಲಿ, ಕೆಳಗೆ ಮೇಲೆ ಹರಿದಾಡುವ ಮೋಡಗಳ ಛಾಯೆ ಭೂಮಿಯ ಮೇಲೆ ಬಿದ್ದಾಗ ಅಲ್ಲಲ್ಲಿಯ ಕೊಳಗಳ ಸಾಮೀಪ್ಯದಿಂದ ಅವು "ಬಿಸಿಲಿನಲಿ ನೀರಡಿಸಿ ಕೊಳಗಳೆಡೆಗೆ ಅಡಿಯಿಡುವ ಸಂಣ ದನಕರುಗಳಂತೆ" ಕಾಂಬುವುದು. ಸಹ್ಯಾದ್ರಿಯ ತಪ್ಪಲು ಭವ್ಯ ಭವನದಂತೆ ಕಾಂಬುದು. ಸಾವಿರ ಕಂಬಗಳ ಭವನ. "ನೂರು ಕಂಬಗಳ ಕರಗಿಸಿ ಮಾಡಿದೊಂದು ಸ್ತಂಭ....ಝುಕ್ಕಿಸಿತಿದರೆದುರಿಗೆಲ್ಲ ಜಕ್ಕಣ್ಣರ ಜಂಭ. ಈ ತಪ್ಪಲೆಲ್ಲ ರಂಗಸಾಲೆ. ಮೃತ್ಯುಲೋಕವೆನುವೆವಿಳೆಯ ಮಾನವನೇ ಇಲ್ಲ. ಸೃಷ್ಟಿಯುದಯ ದಾರಿಯಂತೆ ತೋರುತಿರುವುದೆಲ್ಲ ಧ್ಯಾನಮಗ್ನಳಿವಳು ಮೇದಿನಿ. ಮೌನಯೋಗಿನಿಯು ಸ್ವಪ್ನ ಜೀವಿ ಆಹ್ಲಾದಿನಿ."

ಈ ಪ್ರಶಾಂತ ವಾತಾವರಣವನ್ನು ಮನುಜನು ಕದಡಿದ.

"ಮೌನವಿದನು ಕದಡಿ ಬಂದ: ಮನಜನಿಂದ ಧ್ವಂಸ. ಬುವಿಯ ಹೂಗೊಳದಲಿ ತಾನೆ ರಾಜಹಂಸ"ನೆಂದು ಬಗೆದ. "ಎನಿತೊ ಯುದ್ಧಗಳನು ಹೂಡಿ ನಗರಗಳನು ನಾಶಮಾಡಿ ಸೆಣಿಸಿದ ನರ ತನ್ನ ಕುಲದ ಕರುಳುಗಳನೆ ಹಿಸುಕಿ."

ಮೇಲಿನಿಂದ ಕಂಡ ಮುಂಬಯಿ. "ರಿಬ್ಬನ್ನಿನ ರಸ್ತೆಯ ಸುಳಿವನು ಹಿಡಿದು ಬಸ್ಸು ಟ್ರಾಮುಗಳು. ಎಡಬಲ ಗೊಂಬೆಯ ಮಹಡಿಯುವನೆ. ಅಲ್ಲಲ್ಲಿಯ ಮಿನುಗುತಿರುವ ದೀಪ ಸಾಲ್ಗೊಂಡಿವೆ. ಕರಿಹೊಗೆ ಪುಟಿಸುವ ಕಾರಂಜಿಗಳಂತೆ ಫ್ಯಾಕ್ಟರಿಗಳ ಸಂತೆ. ರಬ್ಬರು ಗೊಂಬೆಗಳಾಟ ರಬ್ಬರು ಸಂಸಾರದ ಸುಖ. ಇಂದಿನ ನಾಗರಿಕತೆಯುಬ್ಬರ ಹೊಯ್ದಾಟ ಬರಿ ರಬ್ಬರಿನಾಟ. "ಪೆಟ್ರೋಲಿನದೇ ಪ್ರಸಾದ ತೀರ್ಥ. ಕಲ್ಲಿದ್ದಲಿ ಲೋಬಾನ. ಮಿಂಚಿನ ಪಂಚಾರತಿ. ವೈಜ್ಞಾನಿಕ ಸೂತ್ರಗಳೇ ಮಂತ್ರ ವ್ಯಾಪಕವಿದು ತಂತ್ರ. ಇಂದಿನ ಕಲಿಯುಗಕೇ ಕಲಿಯೇ ಗುರುವು; ಶುದ್ಧ ತಿರುವುಮುರುವು."

"ಇಳೆಯ ದೇಗುಲಕೆ ಗುಮ್ಮಟದಂತಿದೆ ಗಗನಾಂಗಣ.
ನರನ ಬಾಳ ಸರಣಿ ಸುರರು ಹಾಕಿದಂಥ ರಿಂಗಣ.

ಮಣ್ಣೆ ಮುಗಿಲ ಗಂಟು.
ಸಪ್ತ ಲೋಕದಡಿ ಮುಡಿಯಿದು ಹಿಡಿದಿಹ ಹಿಡಿಮಣ್ಣು.

ನೆಲವೆ ಆಧಾರ. ಎಲ್ಲಕ್ಕೂ ನೆಲವೇ ಆಧಾರ. ವಿಮಾನದಲ್ಲಿದ್ದಾಗಂತೂ ಈ ಮಾತಿನ ಸತ್ಯತೆ ಸುಲಭವಾಗಿ ಕಂಡಷ್ಟು ಬೇರಾವ ಕಾಲದಲ್ಲಿಯೂ ಕಾಣುವುದಿಲ್ಲ.

" ವಾಯು ಸಮುದ್ರದಿ ವಿಹರಿಸಿ ಎಲರೆಲೆಯಲೆಗಳನು ಹರಸಿ
ಮೊಡದಾಚೆಗಿರುವ ನಾಡ ನೋಡಿ ಹಾಡಿ ಬಂದರೂ
ಮುಗಿಲ ಪಾರಿಜಾತಗಳನು ಸವಿ ನೆನಹಿಗೆ ತಂದರೂ
ಮರಳಿ ಬಂದೆ ನಿಳೆಯ ತೊಡೆಗೆ ಭೂಮಿ ತಾಯಿ ಕರೆಯುವೆಡೆಗೆ."

ಏಕೆಂದರೆ ನೆಲವೇ ಆಧಾರ. Walt Disnay ತನ್ನ ಒಂದು ಕಾರ್ಟೂನ ಚಿತ್ರದಲ್ಲಿ ವಿಮಾನನ್ನು ಮೊದಲಿಗೆ ತೋರಿಸುವನು. ಅದಕ್ಕೆ ಒಂದು ಹಲಗೆ ಹಾಕಿರುವನು. Safest thing on earth ಎಂದು. ಮುಗಿಲಿಗೆ ನೆಲವೇ ಆಧಾರ. ವಿಮಾನಿಗೆ ನೆಲವೇ ಆಧಾರ ಎಂಬುದರ ಮನವರಿಕೆ ಆಗುವುದು ಎಲ್ಲದಕ್ಕೂ ನೆಲವೇ ಆಧಾರ. ಅದಕ್ಕೆಂದೆ ಅದಕ್ಕೆ 'ಸ್ಥಿರಾ' ಎಂದು ಹೆಸರು ಬಂದಿರಬೇಕು. ಉಳಿದೆಲ್ಲವೂ ಅಸ್ಥಿರ, ನೆಲವೊಂದೇ ಸ್ಥಿರ. ಅದಕ್ಕೆ ನೆಲವೇ ಆಧಾರ.

ಹತ್ತು ಕವನಸಂಗ್ರಹಗಳ ವಿಹಂಗಮ ನೋಟ ತೆಗೆದುಕೊಂಡಂತಾಗಿದೆ. ಒಳ ಹೊಕ್ಕು ನೋಡಿದರೂ ಬಹಳ ಹೊತ್ತು ನೋಡಿಲ್ಲ. ಕಂಪು, ಇಂಪು, ಪೆಂಪುಗಳಷ್ಟೆ ಕಣ್ಣಿಗೆ ಬಿದ್ದಿವೆ. ಕಿವಿಗೆ ಬಿದ್ದಿವೆ. ಹೃದಯವ ಹಿಡಿದಿವೆ ರಸಿಕನಿಗೆ ಇವಿಷ್ಟೇ ಸಾಕು. ವಿಮರ್ಶೆಯ ಕಸಿವಿಸಿ ಬಡುವವನಿಗೆ ಇದರ ಹೊರತು ಉಳಿದೆಲ್ಲವೂ ಬೇಕು. ಕಸವಿಸಿಯ ಭಾಗ್ಯ ಅವನದು. ಅದನ್ನು ನಾ ಕಸಿದುಕೊಂಡಿಲ್ಲ. ರಸಿಕನಾಗಿ ರಸ ಗ್ರಹಣ ಮಾತ್ರ ಮಾಡಲು ಪ್ರಯತ್ನಿಸಿದ್ದೇನೆ. ವಿಶಾಲ ವ್ಯಾಪ್ತಿಯುಳ್ಳ ಕಾವ್ಯ ಸಮುದ್ರದಲ್ಲಿ ನನಗೆ ಕಾಣದ ರತ್ನಗಳು ಇದ್ದಿರಬಹುದು. ಅವು ನನ್ನ ಈ ವಿಹಂಗಮ ನೋಟದಲ್ಲಿ ಕಂಡಿರಲಿಕ್ಕಿಲ್ಲ. ಆಳವಾದ ಸಮುದ್ರದಲ್ಲಿ ಮುಳುಗು ಹಾಕಿ ಹುಡಿಕಿ ತೆಗೆಯುವ ಸಾಹಸವಿದಲ್ಲ. ಅಲೆಯ ಮೇಲೆ ತೇಲಿ, ನೀರ ನೆಲೆಯನರಿಯದೆ

ರೂಪ, ಸೌಂದರ್ಯಕ್ಕೆ ಮರುಳಾಗಿರುವ ಹಾಗಿದೆ ನನ್ನ ಪಾಡು. ಸದ್ಯಕ್ಕೆ ನನಗೆ ಅಷ್ಟೇ ಸಮಯ—ಸಾಮರ್ಥ್ಯ ಇದ್ದಿತು.

ಸುಮಾರು ಮೂವ್ವತ್ತು ವರುಷ ಕಾಲದಲ್ಲಿ ಬರೆದಿರುವ ಕವನಗಳನ್ನು ಪ್ರಕಟವಾದವುಗಳನ್ನು ಓದಿ ನೋಡಿದಾಗ ಒಂದು ಮಾತು ಸ್ಪಷ್ಟವಾಗುವುದು. ಕವಿಯು ಬೆಳದಿದ್ದಾನೆ. ಬೆಳೆಯುತ್ತಲಿದ್ದಾನೆ. ತನ್ನ ಭಾವಗಳನ್ನೇ ಬಹಿರಂಗದ ಮೇಲೆ ಮೂಡಿಸುವ ಕಾಲದಿಂದ ಹಿಡಿದು ಬಹಿರಂಗದ ಸಂಗತಿಗಳಿಂದ ಅಂತರಂಗವರಳಿಸಿಕೊಂಡುದ ಸಮಯದ ವರೆಗೆ ಇಲ್ಲಿ ಕವಿತೆಗಳ ವಸ್ತು ವಿಸ್ತಾರವಿದೆ ವೈವಿಧ್ಯವಿದೆ ರೂಪ-ರಚನೆಗಳು ವಸ್ತು ವೈಖರಿಗೆ ದೂರು ಹೋಗಿವೆ. ಪ್ರಯೋಗದ ರಭಸ ಕಾಣುವುದು. ಪ್ರಯೋಗದ ಯಶವು ಮನಕ್ಕೆ ಸ್ಫೂರ್ತಿಯನಿತ್ತು ಓದುಗನನ್ನು ವಿಷಯದಲ್ಲಿ, ವಿಚಾರದಲ್ಲಿ ಭಾವನಾಲಹರಿಯಲ್ಲಿ ತಲ್ಲೀನ ಮಾಡುವುದು. ಓದುಗನ ತಲ್ಲೀನತೆಯಲ್ಲದೆ ಕವಿ ಬೇಡುವ ಪ್ರತಿಫಲ ಬೇರೆ ಕಾಣೆ ನಾನು. ತಲ್ಲೀನತೆಯು ಹೃದಯದ ಸಾಮರಸ್ಯವನ್ನು ತೋರುವುದು. ತಲ್ಲೀನತೆಯ ಮೂಲವೇ ಕವಿಯ ಅನುಭೂತಿಯು ಓದುಗರಿಗೆ ರಸಾನುಭೂತಿ ತಂದು ಕೊಡುವುದು. ಇದಾದ ಕವಿ ಕೃತಾರ್ಥ; ಓದುಗ ಕೃತಾರ್ಥ. ಕವಿಯು ಓದುಗನ ಸೊತ್ತಾಗಿ ಓದುಗನು ಹೊಸ ಜೀವನವನ್ನು-ದೃಷ್ಟಿಯನ್ನು ಪಡೆವನು. ಅದೇ ಕವಿಯಾದ ಸೃಷ್ಟಿಕರ್ತನ ಆಸೆ. ಹೊಸ ಸೃಷ್ಟಿಯಲ್ಲಿ ತನ್ನ ಸ್ಥಾನವನ್ನು ತಿಳಿದು ಬದುಕುವ ಓದುಗನ ಸಾರ್ಥಕ್ಯ.

---

## ೫

## ನಾಟಕ

**ಜನ ನಾಯಕ ೧೯೩೯** **ವಿಮರ್ಶಕ ವೈದ್ಯ ೧೯೪೭**

**ಯುಗಾಂತರ ೧೯೪೭.**

ವಿನಾಯಕರ ಕೃತಿ ರಚನಾ ವಿಲಾಸರಂಗವು ಕವನ ರಚನೆ. ಅದು ಮುಖ್ಯವಾದುದು. ಆದರೆ ಕವಿಗೆ ಕಾವ್ಯರೂಪವು ಒಂದು ಹೊರ ಆವರಣವು. ಮೂಲ ಮತ್ತು ಮುಖ್ಯವಾದುದು ಹೃದಯಂತಿಕೆಯ ಪ್ರಕಟನೆ. ಸಾಮಾನ್ಯ ಮಾನವನು ಜೀವನದಲ್ಲಿ ಸುಮ್ಮನೆ ಬಾಳುವನು. ತಾನು ಏತಕ್ಕಾಗಿ ಬಾಳುತ್ತೀನೆ, ಎಂಬುದನ್ನು ವಿಚಾರಿಸುವುದಿಲ್ಲ. ತನ್ನ ಬಾಳು ಹೇಗಿದೆ ಎಂದು ತಿಳಿವ ಗೋಜಿಗೆ ಹೋಗುವುನಲ್ಲ. ಯಾರದೋ ಹೊಣೆಗಾರಿಕೆಗಾಗಿ ಹುಟ್ಟಿ ಬಂದಿದ್ದಾನೆ. ಹುಟ್ಟಿದ ತಪ್ಪಿಗೆ ಬದುಕುತ್ತಾನೆ. ಅದೇ ಅವನ ಬಾಳು. ಸಾಯುವತನಕ ಬದುಕಿರುವುದೇ ಅವನ ಸಾಧನೆ. ಸಾವೇ ಅವನಿಗೆ ಮುಕ್ತಿ. ಈ ಸಾಮಾನ್ಯನು ಹೀಗೇಕೆ ಇದ್ದಾನೆ. ಇವನಿಗೆ ಮಾನವ ಗುಣವಾದ ಮನೋವಿಕಾಸದ ಅರಿವೇಕೆ ಇಲ್ಲ. ಮಾನವನ ಹಾಗೆ ಕಂಡರೂ ಪಶುವಾಗಿಯೇ ಏಕೆ ಜೀವಿಸುತ್ತಾನೆ, ಎಂಬಂತಹ ಸಮಸ್ಯೆಗಳು ಅಸಾಮಾನ್ಯ ಮಾನವನಾದ ಕವಿಯ ಹೃದಯ ಬುದ್ಧಿಗೆ ಬಡಿದು ಪ್ರತಿಕ್ರಿಯೆ ಪರಿಹಾರಗಳನ್ನು ಸೂಚಿಸುವ ಕೆಲಸವನ್ನು ಅವನು ಮಾಡುವನು. ಜೀವನದ ದರ್ಶನದಿಂದ ಜೀವಿಸಿರುವ ಮಾನವನಿಗೆ ಹೊಸ ದೃಷ್ಟಿ ಕೊಡುವ ಹಾಗೆ ಹೊಸ ಜೀವನ ಸೃಷ್ಟಿಮಾಡಿ ಮಾರ್ಗದರ್ಶನ ಮಾಡುವನು. ತಾನು ಕಂಡ ಕನ್ನಡಿಯನ್ನು ಜೀವಿಗಳಿಗೆ ತೋರುವನು. ಅದಕ್ಕಾಗಿ ವಿವಿಧ ರೂಪ ತಳೆವುದು ಈ ಕನ್ನಡಿ. ನಾಟಕವು ಇಂತಹ ಒಂದು ಕನ್ನಡಿ.

ವಿನಾಯಕರು ಮೂರು ನಾಟಕಗಳನ್ನು ಬರೆದಿದ್ದಾರೆ. ಜನನಾಯಕ, ವಿಮರ್ಶಕ ವೈದ್ಯ ಮತ್ತು ಯುಗಾಂತರ :

'ಜನ ನಾಯಕ'ವು ವಿನಾಯಕರು ಬರೆದ ಮೊದಲನೆಯ ನಾಟಕ. ಇದಕ್ಕೂ ಮೊದಲು ಒಂದು ದೃಶ್ಯವನ್ನು ಬರೆದಿದ್ದರು. ಅದರ ಹೆಸರು 'ತುಳಸಿ' ಎಂಬುದು. ಕೋಲ್ಮಿಂಚು ಎಂಬ ಏಕಾಂಕ ಸಂಗ್ರಹದಲ್ಲಿ ಅದು ಪ್ರಕಟವಾಗಿದೆ ಜನನಾಯಕದ ಮುನ್ನುಡಿಯಲ್ಲಿ 'ತುಳಸಿ'ಯ ಬಗ್ಗೆ ಹೀಗೆ ಬರೆದಿದ್ದಾರೆ: 'ತುಳಸಿ' ಎಂಬ ದೃಶ್ಯವನ್ನು ಓದುಗರಿಗಾಗಿ ಇಲ್ಲವೆ ಪ್ರೌಢ ಪ್ರೇಕ್ಷಕರಿಗಾಗಿ 'ಜಯನಾಯಕ'ನನ್ನು ಯಾರೂ ಆಡಬಹುದು. ಆ ಬಾಲ ವೃದ್ಧರ ರುಚಿಗೆ ಸರಿಹೋಗುವಂತೆ ಅದನ್ನು ಬರೆದದ್ದಾಗಿದೆ. ನನಗೆ ತಿಳಿದ ಮಟ್ಟಿಗೆ ಪುಣೆಯಲ್ಲಿ ಪ್ರಯೋಗಿಸಿದ ಮೊದಲನೆಯ ಕನ್ನಡ ನಾಟಕವೆಂದರೆ 'ಜನನಾಯಕ'ವೆಂದೇ ಹೇಳಬಹುದು." ಪುಣೆಯ ಕರ್ನಾಟಕ ಸಂಘದವರಿಗೆ ಒಂದು ಕನ್ನಡ ನಾಟಕ ಬೇಕಿತ್ತು. "ನಾನು ಜನನಾಯಕವನ್ನು ಬರೆದೆನು. ಒಂದು ಪ್ರವೇಶವನ್ನು ಬರೆದಾಗ ಅದರ ಮುಂದಿನದು ಏನಾಗಬಹುದೆಂಬುದರ ಅರಿವು ನನಗಿರುತ್ತಿರಲಿಲ್ಲ. ನಾನು ನಾಟಕವನ್ನು ಬರೆಯುತ್ತ ಹೋದ ಹಾಗೆ ಕಥೆಯು ತನ್ನನ್ನೇ ತಾನು ಕಟ್ಟಿಕೊಂಡಿತು. ರಂಗಭೂಮಿಯ ಆವಶ್ಯಕತೆಗಳ ಕಲ್ಪನೆಯೆ ನನಗೆ ಇರಲಿಲ್ಲ. ರಂಗತಾಲೀಮು ನಡೆದ ಹಾಗೆಲ್ಲ ಬೇಕೆನಿಸಿದಲ್ಲಿ ಹೊಸದಾಗಿ ಪ್ರವೇಶಗಳನ್ನು ಸೇರಿಸಿದೆನು. ಈ ರೀತಿಯಾಗಿ 'ಜನನಾಯಕ ಬೆಳೆದು ನಿಂತಿತು.... ನಾನು ವಿಲಾಯತಿಗೆ ಹೋಗುವ ಪೂರ್ವದಲ್ಲಿ ಈ ನಾಟಕವನ್ನು ಬರೆದೆನು.

"ಜನನಾಯಕದ ಮುಖ್ಯ ವಸ್ತು ಪ್ರತೀಕಾರ. ಶಕ್ತಿ ವ್ಯಕ್ತಿಗಳ ನಡುವೆ ಚಿರಂತನವಾಗಿ ನಡೆದ ಕಲಹವನ್ನು ಚಿತ್ರಸಲು ನಾನು ಮಾಡಿದ ಇನ್ನೊಂದು ಹವಣಿಕೆಯಿದು. ಇದರಲ್ಲಿ ನಮ್ಮ ಸಮಾಜವನ್ನೆ ಹಿನ್ನೆಳಲಾಗಿ ಇಟ್ಟುಕೊಂಡಿದ್ದೇನೆ. ಬೇವಿನ ಹಳ್ಳಿಯೆ ಘಟನೆಯ ಸ್ಥಳ. ಅಲ್ಲಿಯ ಜಾಗೀರದಾರರಾದ ದೇಸಾಯಿಯವರು ಮುಖ್ಯ ಪಾತ್ರ. ಅವರೇ ಹಣಮಪ್ಪ ದೇಸಾಯರು. ಇವರ ತಂದೆಯು ಲಕ್ಕಣ್ಣೊಡೆಯರು. ಲಕ್ಕಣ್ಣೊಡೆಯರ ಕಾಲದಲ್ಲಿ ಎಲ್ಲ ಸುವ್ಯವಸ್ಥೆ. ಪಾಲಕರಾಗಿ ಅವರು ಪ್ರಜೆಯನ್ನು ನೋಡಿಕೊಂಡರು. ಹಣಮಪ್ಪ ದೇಸಾಯರಿಗೆ ಆ ಉದಾತ್ತ ಸಂಸ್ಕೃತಿಯಿದ್ದಿಲ್ಲ. ದರ್ಪವೇ ಅವರ ಆಧಾರ. ಸೊಕ್ಕು ದರ್ಪದ ರೂಪ ತಳೆದಿತ್ತು. ಜಾಗ್ರತವಾದ ಸಮಾಜವು ಈ ಸೊಕ್ಕನ್ನು ದಕ್ಕಿಸಿಕೊಳ್ಳದೆ ಸಂಘಟಿತವಾಗುತ್ತಿತ್ತು. ಇದಕ್ಕೆ ಭೀಮಪ್ಪ

ನಾಯಕನೇ ಮುಂದಾಳು. ಈ ಮುಂದಾಳನ್ನು 'ಮುಗಿಸಿ' ಬಿಟ್ಟರೆ ತಾನೇ ನಿರಾತಂಕವಾಗಿ 'ಆಳ'ಬಹುದೆಂದು ಬಗೆದ ದೇಸಾಯರ ಚಟುವಟಿಕೆಗಳು ನಾಟಕದಲ್ಲಿಯ ಸನ್ನಿವೇಶಗಳು. ಕೊನೆಗೆ ಭೀಮಪ್ಪನಾಯಕನ ಕೊಲೆ ಯಾಗುವುದು. ಭೀಮಪ್ಪನಾಯಕನು ವ್ಯಕ್ತಿಯೆಂದು ಸತ್ತರೂ ಜನತೆಯಲ್ಲಿ ಮೂಡಬೇಕಾದ ಶಕ್ತಿಯ ಎಚ್ಚರ ಮೂಡಿದೆ. ಇದೇ ಇಲ್ಲಿನ ಕಥಾ ಸಾರಾಂಶ."

ಈ ನಾಟಕವು ರಂಗಭೂಮಿಯ ಮೇಲೆ ಮೂರು ಸಲ ಯಶಸ್ವಿಯಾಗಿ ಪ್ರಯೋಗವಾಗಿದೆ. ಪುಣೆಯಲ್ಲಿ, ಜಮಖಂಡಿಯಲ್ಲಿ ಹಾಗೂ ಅಥಣಿಯಲ್ಲಿ. ನಾಟಕದ ಯಶಸ್ಸು ರಂಗಭೂಮಿಯ ಮೇಲೆಯೆ. ಅಂದರೆ ನಟರ ಸಾಮರ್ಥ್ಯವೂ ಅದಕ್ಕೆ ಪೋಷಕವಾದುದು. ದೇಸಾಯಿಯ ಪಾತ್ರ, ಕಾರಕೂನನ ಪಾತ್ರ ಇವು ಪರಸ್ಪರ ಪೋಷಕವಾಗಿವೆ. ಪರಾವಲಂಬಿಯಾದ ದೇಸಾಯರಿಗೆ ಸಂತತವಾಗಿ 'ಸದುಪದೇಶ' ಮಾಡುವವನು ಕಾರಕೂನನು. ಅವನೇ ಎಲ್ಲ ದೇಸಾಯರ ಕೃತಿಗಳಿಗೆ ಮೂಲ ಕಾರಣನು. ಹಿರಿಯರ ಕಾಲದಿಂದ ಕೆಲಸ ಮಾಡುತ್ತ ಬಂದ ರಾಮಣ್ಣ–ಕಾರಭಾರಿಗೆ ನಿಜವಾದ ಉಪದೇಶಕ್ಕೆ ಮಾರ್ಗ ವಿಲ್ಲದಂತೆ ಕಾರಕೂನರು ಮಾಡಿ ಬಿಟ್ಟಿರುತ್ತಾರೆ. ಆದ್ದರಿಂದ ಸ್ವಾಭಿಮಾನಿ ಗಳಾದ ಭೀಮಪ್ಪನಾಯಕರಂತಹರಿಗೆ ಬಾಳುವುದೇ ಕಠಿಣ. ಅಲ್ಲದೆ ನಾಯಕರು ದೇಸಾಯರ ಹಿರಿಯರಿಗೆ ವಚನಕೊಟ್ಟವರು. ಗಾದಿಯ ಮಾಲಕನನ್ನು ಬಂಧುವೆಂದು ನೋಡಿಕೊಂಡು, ಊರಲ್ಲಿಯ ವಾತಾವರಣವನ್ನು ತಮ್ಮ ಪ್ರಭಾವದಿಂದ ಹಿಡಿತದಲ್ಲಿಟ್ಟುಕೊಳ್ಳಬೇಕೆಂದು. ಆದರೆ ಅದಕ್ಕೆ ಮಿತಿಯಿದೆ. ಕೈತಪ್ಪಿ ಆದ ತಪ್ಪುಗಳನ್ನು ಮನ್ನಿಸಬಹುದು. ಬುದ್ಧಿ ಪೂರ್ವಕ ಮಾಡಿದವು ಗಳನ್ನು ಪ್ರತಿಭಟಿಸದೆ ಬಿಟ್ಟರೆ ಕರ್ತವ್ಯ ಚ್ಯುತಿಯಾಗುವುದು. ಕರ್ತವ್ಯ ಮಾಡಲು ಹೋದಾಗ ಕೊನೆ ಕಂಡರು ಭೀಮಪ್ಪನಾಯಕರು. ಉದಾತ್ತ ಚರಿತನಾದ ಭೀಮಪ್ಪನೆ ಈ ನಾಟಕದ ನಾಯಕ.

ನಾಟಕದಲ್ಲಿಯ ಮಾತುಗಳು ಉದ್ದುದ್ದವಾಗಿವೆ. ಒಂದು ರೀತಿಯ ಚಿಕ್ಕ ಭಾಷಣಗಳಾಗಿವೆ. ಅದರಿಂದ ಭಾಷೆಯು ಚೆನ್ನಾಗಿದೆ. ಆದರೆ ಉದ್ದುದ್ದ ಮಾತುಗಳು ಬಂದಾಗ ಉಳಿದ ನಟರು ಏನು ಮಾಡಬೇಕೆಂಬುದು ಒಂದು ಸಮಸ್ಯೆಯಾಗುವುದು. ಆದರೆ ವಾತಾವರಣ ಜನ್ಯವಾದ ಕಥಾನಕವು ಇರುವಾಗ ವಾತಾವರಣವು ಪ್ರೇಕ್ಷಕರನ್ನು ಹಿಡಿದಂತೆ ನಟರನ್ನು ಮಾತಿನ ಲಹ

ರಿಯು ಮಂತ್ರ ಮುಗ್ಧರನ್ನಾಗಿ ಮಾಡಿ ಅವರು ತೊಂದರೆಗೀಡಾಗುವ ರೆಂಬುದು ಕೂಡ ಕಾಂಬುದಿಲ್ಲ. ಕರಿಯ, ಡಂಗುರದವ, ಗಂಗಜ್ಜ ನಂತಹ ಪಾತ್ರಗಳು ಬಂದಾಗ ನೋಡುಗರಿಗೆ ಹಬ್ಬ. ಹಾಡು–ಲಾವಣಿಗಳು ಜನ ಸಾಮಾನ್ಯರಿಗೆ ರಂಜನೆಯನ್ನುಂಟು ಮಾಡುವುವು. "ಪ್ರಯೋಗ ಪ್ರಧಾನಂ ಹಿ ನಾಟ್ಯಂ" ಎಂಬ ಸೂತ್ರವು ಇದಕ್ಕೆ ಅನ್ವಯಿಸುವುದು. ಅದರಲ್ಲಿಯೆ ಇದರ ಯಶಸ್ಸು.

"ವಿಮರ್ಶಕ ವೈದ್ಯ" ಎಂಬುದು ದೀರ್ಘವಾದ ಒಂದು ಏಕಾಂಕ ನಾಟಕ. ಇಲ್ಲಿ ವಿಡಂಬನೆ ಮುಖ್ಯ ಉದ್ದೇಶ. ಆದ್ದರಿಂದ ಇದು ಹಾಸ್ಯ ರಸ ಪ್ರಧಾನವಾದುದು. ವಿಡಂಬನಾತ್ಮಕ ಮಾತು ಸನ್ನಿವೇಶಗಳು ಇದರ ಜೀವಾಳವಾಗಿದೆ. ಹೆಸರು ಸೂಚಿಸುವಂತೆ ವಿಮರ್ಶೆ ಇಲ್ಲಿಯ ಕಾರ್ಯ. ಅದರ ಅಧಿಪತಿ ವೈದ್ಯ. ಈ ವಿಮರ್ಶಕ ವೈದ್ಯನು ತನ್ನಲ್ಲಿ ಚಿಕಿತ್ಸೆಗಾಗಿ ಬಂದ ಸಾಹಿತ್ಯವನ್ನು ಪರೀಕ್ಷಿಸಿ ಅದಕ್ಕೆ ನಿದಾನವಾದ ಮಾತುಗಳನ್ನು ಹೇಳುವುದು. ಕನ್ನಡದಲ್ಲಿ ಸಾಹಿತ್ಯ ಬೆಳೆಯಬೇಕು, ಎಂದು ಆಶಿಸಿದಾಗ, ಮೂಲೆಗೊಬ್ಬ ಸಾಹಿತಿಯು ಉದಯವಾದನು. ಬರೆಯಲಿಕ್ಕೆ ಬಂದವರೆಲ್ಲ ಸಾಹಿತಿಗಳೇ. ಆವರೆ ಇವರ ಕೈಗೆ ಸಿಕ್ಕ ಓದುಗನು ತಿಳಿಯಲಾರದೆ ಜರ್ಜರಿತನಾದ. ಆದ್ದರಿಂದ ಚಿಕಿತ್ಸೆ ಆವಶ್ಯಕವಾಯಿತು. "ವಿಮರ್ಶಕ ವೈದ್ಯನ" ಉದಯವಾಯಿತು.

ಹಾಸ್ಯವಿಡಂಬನೆಗಳ ದ್ವಾರಪಾಗಿ ಸತ್ಯ ಹಾಗೂ ಔಚಿತ್ಯದ ಪಕ್ಷವನ್ನು ಸಮರ್ಥಿಸುವ ಏಕಾಂಕವಿದು. ವಿಮರ್ಶಕ ವೈದ್ಯನಾಗಿ ಹೇಗೆ ಹಣ ಗಳಿಸಬಹುದು ಎಂದು ಡಾ. ದಿನಕರರಾಯರ ಕಂಪೌಂಡರು ಭೀಮಣ್ಣ ಕೇಳುತ್ತಾನೆ ಅವಕ್ಕೆ ಡಾಕ್ಟರರ ಉತ್ತರ :

"....ವಕೀಲರೆಂದರೆ ಕೀಲವಿಲ್ಲದ ಗಾಲಿಯಂತಾಗಿದ್ದಾರೆ. ಡಾಕ್ಟರರಾಗಬೇಕೆಂದರೆ ಪ್ಲೇಗು, ಪಿಡುಗು, ಗುದ್ದವ್ವನ ಬೇನೆ, ಮಾರಿಕಾ ಎಲ್ಲ ರೋಗಗಳೂ ದೇಶವಲ್ಲಿ ಕಡಿಮೆಯಾಗುತ್ತ ಬಂದವು. ಮಾಸ್ತರನಾಗಬೇಕೆಂದರೆ, ಮಾಸ್ತರರ ಸಂಖ್ಯೆಯು ಹುಡುಗರಗಿಂತ ಹೆಚ್ಚಾಗಿ ಬೆಳೆದದೆ..... ಹೀಗೆ ಚಿಂತೆಯಲ್ಲಿ ಬಿದ್ದಾಗ ಕರ್ನಾಟಕದಲ್ಲಿ "ಬರುತಿದೆ ಸುಗ್ಗಿ ಬರುತಿದೆ; ಸಾಹಿತ್ಯದ ಸುಗ್ಗಿ ಬರುತಿದೆ." ಎಂದು ಒಂದೆಡೆಗೆ ಓದಿದೆನು. ಝುಗ್ಗನೆ ಮನ

ಸ್ಸಿಗೆ ಹೊಳೆಯಿತು. ಸಾಹಿತ್ಯದಲ್ಲಿ ವಸಂತ ಮಾಸವು ಬರುವುದೆಂದರೆ—ದೇಶಕ್ಕೆ ಪ್ಲೇಗು ಬಂದಂತೆ. ಪ್ಲೇಗು ಬಂದಾಗ ಡಾಕ್ಟರರು ಧನ್ಯರಾಗುವಂತೆ ಸಾಹಿತ್ಯದ ಮಧುಮಾಸ ಬಂದಾಗ ವಿಮರ್ಶಕರು ಧನ್ಯರಾಗುವಂತೆ...."

ಈ ಸಾಹಿತ್ಯದಲ್ಲಿ ಅನೇಕ ಪ್ರಕಾರದ ರೋಗಗಳು. ಸಾಹಿತ್ಯಕರಿಂದ ಉಂಟಾದ ರೋಗಗಳು. ನೀಲಕಂಠಶಾಸ್ತ್ರಿಗಳು ಹಳೆಯ ಸಂಪ್ರದಾಯದವರು. ಅವರಿಗೆ ಚಂಪೂ ಶೈಲಿಯು ಒಗ್ಗಿರುವುದು. ವೃತ್ತ, ಕಂದಗಳೇ ಅವರ ಕಾವ್ಯ ರೂಪ. ಆದರ ದಾಟಿ ಉಳಿದ ಧಾಟಿಯನ್ನು ಅವರು ಕಂಡಿಲ್ಲ. ಡಾಕ್ಟರು ಅವರಿಗೆ ಹೀಗೆ ಹೇಳುವರು : "ನಿಮ್ಮ ಈ ಅಳದಕ್ಕಿಯನ್ನು ನಿಲ್ಲಿಸಿರಿ. ಪುನರ್ಜನ್ಮ ಬರುವತನಕ ಕವಿಯಾಗುವ ಆಶೆಯನ್ನು ಬಿಟ್ಟುಬಿಡಿರಿ." ಶಾಸ್ತ್ರಿಗಳು ಸಿಟ್ಟಿಗೆದ್ದು ಶಾಲು ಅಪ್ಪಳಿಸುತ್ತ ಹೋಗುವರು. ಅವರ ಬೆನ್ನಿಗೆ ಬರುವವರು ಕೊಳ್ಳಿ ಮಾಸ್ತರು; ಶಾ. ಮಾ. ಇವರು. ವಿನಯ ಅತಿಯಾಗಿ ನೆಲವಮೇಲೆ ಕೂಡುವರು. ಆಗ ಡಾಕ್ಟರರು " ಈ ಸುಳ್ಳು ವಿನಯವೇಕೆ ? ಕುರ್ಚಿಯ ಮೇಲೆ ಕೂಡುವದರಲ್ಲಿಯೇ ದೊಡ್ಡಿಸ್ತಿಕೆಯಿದ್ದರೆ, ಕಾರಕೂನರೆಲ್ಲ ಕಲೆಕ್ಟರರಾಗುತ್ತಿದ್ದರು " ಕೊಳ್ಳಿ ಮಾಸ್ತರು "ಪಲಾಂಡು ಕನ್ಯಾಪಹರಣ" ಎಂಬ ಕಾವ್ಯ ಬರೆದುಕೊಂಡು ಬಂದಿದ್ದರು. ಇತಿಹಾಸದ ಕವಿತೆ. ಪೋಲಂಡ ದೇಶದ ಮೇಲಿನ ದಾಳಿಯನ್ನು 'ಪಲಾಂಡು ಕನ್ಯಾಪಹರಣ' ಎಂದು ಪರಿವರ್ತಿಸಿ, ಷಟ್ಪದಿಯಲ್ಲಿ ಕಾವ್ಯ ಬರೆದಿದ್ದರು. "ನೀವು ಆಂಗ್ಲ ಭಾಷೆಯನ್ನು ಕಲಿಯಬೇಕು" ಎಂದು ಉಪಚರಿಸಿ ಕಳಿಸಿದರು ಡಾಕ್ಟರರು.

ನಂತರ ಬಂದ ಅಭಿನವ ಚಾಸರರು ತಮ್ಮ ಪರಿಚಯ ತಾವೇ ಮಾಡಿಕೊಳ್ಳುತ್ತಾರೆ; ನಾನು ಕಾವ್ಯ ಪಿತಾಮಹ; ಶೇಕ್ಸಪಿಯರನ ಚಿಗಪ್ಪ, ಮಿಲ್ಟನ್ನ ಮುತ್ತಜ್ಜ. ಕನ್ನಡ ಕಾವ್ಯವು ನನ್ನಿಂದ ಪ್ರಾರಂಭವಾಯಿತು. ನಾನು ಯಾವಾಗಲೂ ಬರೆಯುವುದು ಫ್ರಂಟ ಸೀಟ ಕವಿತೆಗಳನ್ನು. ಪ್ರತಿಯೊಂದು ಮಾಸಿಕದಲ್ಲೂ ಮೊದಲ ಪುಟದಲ್ಲಿರುವ ಕವಿತೆಗಳು ನನ್ನವೆಂದೇ ತಿಳಿಯಬೇಕು..... "ದೇವರ ಅಳ್ಳಿಟ್ಟಿನ ಗಂಟು, ಚಂದ್ರನೆಂಬ ಹೆಸರದಕುಂಟು" ಇದು ನನ್ನ ಕವನ. "ದನಕಾಯುವಾತನೇ! ಹೋಗು ಐದು ಕುರಿಕಾಯು" ಎಂದು ನಾನು ಕೊಟ್ಟ ಶಾಪದಿಂದ ಸರಳರಗಳೆಯ ಛಂದಸ್ಸು ಹುಟ್ಟಿತು. ಡಾಕ್ಟರರು ಅದಕ್ಕೆ ನುಡಿದರು: ನೀವು ವರ್ತ್ಸವರ್ಥ. You are worth

your words." ಅದಕ್ಕೆ ಕವಿ "ಕನ್ನಡದ ಶೆಲ್ಲಿ ನಾನು. ಅತೀಂದ್ರಿಯ ಪ್ರೇಮ ಗೀತೆಗಳನ್ನು ಕನ್ನಡದಲ್ಲಿ ನಾನು ಬರೆದೆ.'' ಎಂದರು.

ಡಾ. : ಸಾಕುಮಾಡಿರಿ. ವಿಲಾಯತಿಯ ಮಣ್ಣು ತಿಂದು ನಿಮಗೆ ಪಾಂಡುರೋಗವಾಗಿದೆ. ಅಜೀರ್ಣದಿಂದ ಆಮಾತಿ ಸಾರವಾಗಿದೆ. ಮೌನದ ಅಮೃತ ಬಳ್ಳಿಯನ್ನು ನೀವು ಸೇವಿಸಬೇಕು."

ಇವರನ್ನು ಹೊರಗೆ ಹಾಕಲು ಬಂದಾಗ ಡಾಕ್ಟರರಿಗೆ ಇನ್ನೊಂದು ಪೇಶಂಟು ಸಿಕ್ಕಿತು. ಕಿಶೋರ ಕವಿಗಳಿಗೆ ಕಾವ್ಯಸಮಾಧಿ ಬಂದು ಗಟಾರ ದಲ್ಲಿ ಬಿದಿದ್ದರು. ಕಾವ್ಯ ಸಮಾಧಿಯಲ್ಲಿಯೇ ಅವರು :

'' ಕಾಫಿಯು ನಾನು, ಚಹವೂ ನಾನು; ಅದ ಗಟಗಟ ಕುಡಿವವ ನಾನು
ಕುಡಿದೂ ಇಲ್ಲೆಂದೆನುವವ ನಾನು. ಶಿವ ಶಿವಾ ಹರಸಾಂಬ ಶಿವಾ."

ಎಂದು ಕವಿತೆಯನ್ನು ಹೇಳಿಬಿಟ್ಟರು. ಡಾಕ್ಟರರು–ನಿದಾನಿಸುತ್ತಿದ್ದಾಗ

'' ದೌತಿಯೊಳಿರುವಾ ಮಸಿಯೂ ನಾನು.
ಮೈಯೊಳಗಿರುವಾ ಒಣ ಹಸಿಯೂ ನಾನು.
ಎದೆ ಹೊಟ್ಟೆಯೊಳಿಹ ಕಸವಿಸಿ ನಾನು
ಸಾಂಬ ಶಿವಾ ಹರ ಸಾಂಬ ಶಿವಾ."

ಆಗ ಭಟ್ಟಾರಕರು ಬರುವರು. ಕನ್ನಡ ನಾಟ್ಯ ಸೃಷ್ಟಿಯ ನೂತನ ಪುತ್ರರು ಇವರು. 'ಹಳದಿ ನೃಪವಿಜಯ' ಒದುತ್ತಿದ್ದಾರೆ. ಇವರಿಗೆ 'ಕವಿತಾ ಕಾಮಿನಿ' ಆಗಿದೆ. ಕಾಮಣಿಯಾಗಿದೆ ಈ ನಾಟಕ ಕಾರರಿಗೆ. ನಂತರ ಕುಂಡಿ ಲಿನೀ ಕವಿಯು ಬರುವ. ಅವನು ಡಾಕ್ಟರರ ತಲೆಯನ್ನು ಕೆಡಿಸುವ. ಆಗ ಡಾಕ್ಟರರು :

'' ಭೀಮೂ. ಒಂದು ದಿವಸದಲ್ಲಿಯೇ ಈ ಸಾಹಿತಿಗಳ ಸಂಗತಿ ಸಾಕು ಬೇಕಾಗಿ ಹೋಯಿತು. ನಾನು ಅವರ ಮೇಲೆ Practice ಮಾಡಿ ಬದುಕು ವುದು ದೂರದ ಮಾತು..... ಇನ್ನು ಈ ಸಾಹಿತ್ಯದ ಉಸಾಬರಿ ಬಿಟ್ಟು ಬಿಡು ತ್ತೇನೆ." ಇದು ವಿಮರ್ಶಕ ವೈದ್ಯನ ಸ್ಥಿತಿ. ವೈದನೇ ರೋಗಿಯಾಗುವ ಹಾಗೆ ನಮ್ಮಲ್ಲಿಯ ಸಾಹಿತ್ಯದ ಬೆಳೆಯಿದೆ. ಆದರ ವ್ಯಾಪ್ತಿಯಿದೆ. ಈ ಯುಗ ಎಂದು ಬದಲಾಗಬೇಕು ?

'ಯುಗಾಂತರ'ವು ವಿನಾಯಕರ ಮೂರನೆಯ ನಾಟಕ ಇವನ್ನು ಹೊಸ ಬಾಳಿನ ಸುಕುಮಾರ ಪ್ರಯೋಗ ಎಂದು ಕರೆಯಲಾಗಿದೆ. ಹೊಸ ಬಾಳು ಹೊಸ ಮನ್ವಂತರದ ಪರಿಣಾಮ. ಸಮತಾವಾದವೇ ಇಂದಿನ ಮಂತ್ರವಾಗಿದೆ. ಅದರಲ್ಲಿಯೂ ಮಾರ್ಕ್ಸವಾದ. ಈ ಕಾರಣಕ್ಕಾಗಿ " ಇಂದಿನ ಯಾವ ದರ್ಶನವೂ ಮಾರ್ಕ್ಸ ದರ್ಶನವನ್ನು ಒಂದಿಲ್ಲೊಂದು ರೀತಿಯಿಂದ ಒಳಪಡಿಸಿಕೊಳ್ಳದೆ ಪೂರ್ಣವಾಗಲಾರದು. ಆದರೆ ಮಾರ್ಕ್ಸವಾದವು ಮೂಲದಲ್ಲಿ ಭೌತಿಕವಾಗಿದೆ. ಬುದ್ಧಿ ವಿಜ್ಞಾನಗಳ ಸಹಾಯದಿಂದ ಕಂಡಿರುವುದೇ ಸತ್ಯವೆಂದು ಸಾರುತ್ತದೆ ಸಾವಿರಾರು ವರುಷಗಳಿಂದ ಬೆಳೆದು ಬಂದ ಅನುಭಾವದ (Mysticism) ಪರಪಂರೆಯನ್ನು ಅದು ಅಲ್ಲಗಳೆಯುತ್ತದೆ. ಬುದ್ಧಿಯಲ್ಲದೆ ಬೇರೊಂದು ಜ್ಞಾನ ಸಾಧನೆಯೂ ಇದೆ. ಅದೇ ಸಮಗ್ರ ಮಾನವನ ಒಳನುಡಿ ( Intition ) ಹೀಗಾಗಿ ವಿಚಾರದ ಅಪೂರ್ಣತೆಯೆ ಮಾರ್ಕ್ಸವಾದವನ್ನು ಆವರಿಸಿದೆ. ಇಂದು ಮಾರ್ಕ್ಸವಾದ ಹಾಗು ಅನುಭಾವಗಳ ನಡುವೆ ಸೇತುವೆ ಕಟ್ಟಿ ಪೂರ್ಣ ಜೀವನದ ದರ್ಶನವನ್ನು ನಿಚ್ಚಳವಾಗಿಸಬೇಕಾಗಿದೆ. ಆವ ಕಾರಣ ಕವಿಯು ಸಮತಾ ಸಮಾಜವನ್ನು ತನ್ನ ಧ್ಯೇಯವಾಗಿ ಸ್ವೀಕರಿಸುತ್ತಾನೆ. ಇಂದು ಜಗತ್ತನ್ನೇ ಎದುರಿಸಿದ ಜಟಿಲ ಸಮಸ್ಯೆಗಳಿಗೆ ಸಮನ್ವಯವೇ ಸಮರ್ಪಕ ಉತ್ತರವಾಗಬಹುದು. ಇಲ್ಲಿ ಚಿತ್ರಿತವಾದದ್ದು ಒಂದು ಬೌದ್ಧಿಕ ಸಮಸ್ಯೆಯಲ್ಲಿ ಉಜ್ಜೀವನದ ಒಂದು ಪರಿ. ಭಾರತವು ಈ ಸಮನ್ವಯಕ್ಕೆ ಫಲವತ್ತಾದ ಭೂಮಿಯಾಗಿದೆ ಇಂದಿನ ಸಂಧಿಕಾಲವೇ ಯುಗಾಂತರದ ಸೂಚನೆಯನ್ನು ಕೊಡುತ್ತದೆ.

ಇದು ಮೂರಂಕಿನ ನಾಟಕ. ಇದರಲ್ಲಿ ಬರುವ ಪಾತ್ರಗಳು ಹನ್ನೊಂದು. ಕಿಶನ್ ಕಿಶೋರ-ರುಕ್ಮಿಣಿದೇವಿ ದಿಲ್ಲಿಯಲ್ಲಿ ವಾಸವಾಗಿದ್ದ ಶ್ರೀಮಂತ ಜತೆ. ದಿಲ್ಲಿಯ ಸಾಮಾಜಿಕ ವಾತಾವರಣಕ್ಕ ಬೇಸತ್ತು ಆಧ್ಯಾತ್ಮಿಕ ಜೀವನದಾಸೆ ಮಾಡಿ ಮಾಹುವಿಗೆ ಹೋಗಿ ನೆಲಸುತ್ತಾರೆ. ಕಾಂತಿ ಚಂದ್ರ ,ರೋಹಿಣಿ ದೇವಿಯುವರು ಮಥುರೆಯ ಶ್ರೀಮಂತರು ಸಮಾಜ ಸೇವೆಗೆ ದಿಲ್ಲಿಯು ಒಳ್ಳೇ ಭೂಮಿಕೆಯಾಗಿದೆ ಎಂದು ದಿಲ್ಲಿಗೆ ಬಂದು ನೆನಸುತ್ತಾರೆ. ಬನಸೀಲಾಲನು ಸಮಾಜ ಸೇವೆಯ ಸೋಗುಹಾಕಿ ಸ್ವಾರ್ಥ ಸಾಧಿಸುವ ಶ್ರೀಮಂತ. ಪೋಪಟಲಾಲನು ಬನಸೀಲಾಲನ ಸೋದರಳಿಯ. ಯಾವುದರ ಪೂರ್ಣ

ತಿಳಿವಳಿಕೆಯಿಲ್ಲದೆ ಬನಸೀಲಾಲನ ಕಾರ್ಯ ಸಾಧನೆಯಲ್ಲಿ ನೆರವಾದವನು. ಕೋಸಲೇಂದ್ರನು ಒಬ್ಬ ಕವಿ. ಮೃಣಾಲಿನಿಯು ಮಾರ್ಕ್ಸವಾದದ ಮೂರ್ತಿ. ಇವರೇ ಮುಖ್ಯ ಪಾತ್ರಗಳು. ದಯಾರಾಮ, ಓಂ ಪ್ರಕಾಶ, ನಥೂರಾಮ ಇವರು ಸೇವಕರು.

ಮೊದಲಂಕಿನಲ್ಲಿ ಮೊದಲನೆಯ-ಹಾಗೂ ಎರಡನೆಯ ಶ್ರೀಮಂತ ಜತೆಗಳು ದಿಲ್ಲಿ ನಿಲ್ದಾಣದಲ್ಲಿ ಭೆಟ್ಟಿಯಾಗುತ್ತಾರೆ. ಒಬ್ಬರು ದಿಲ್ಲಿ ಬಿಡುವುದರಲ್ಲಿದ್ದಾರೆ; ಇನ್ನೊಬ್ಬರು ದಿಲ್ಲಿಗೆ ಆಗಮಿಸಿದ್ದಾರೆ. ಪರಸ್ಪರ ಪರಿಚಯ, ತಾವು ಮಾಡಿದ ಮಾಡಬೇಕೆಂದಿರುವ ಕೆಲಸದ ವಿಷಯ ಚರ್ಚಿಸುತ್ತಾರೆ. ಕೋಸಲೇಂದ್ರ ಮೃಣಾಲಿನಿಯರು ಮೊದಲನೆಯ-ಎರಡನೆಯ ಶ್ರೀಮಂತ ಜತೆಯ ಸಂಬಂಧವುಳ್ಳವರಾಗಿದ್ದು ಅವರವರು ಮಾತನಾಡುವಾಗ ತಮ್ಮ ಮಾತಿನಿಂದ ತಮ್ಮ ಸ್ವಭಾವ ಪರಿಚಯಮಾಡಿ ಕೊಡುತ್ತಾರೆ. ಬನಸೀಲಾಲ ಪೋಪಟಲಾಲರು ತಮ್ಮ ಬಗೆಯನ್ನು ಅರಳಿಸಿ ತೋರಿಸುತ್ತಾರೆ. ಇಲ್ಲಿ ಎಲ್ಲರೂ ಸಮಾಜ ಸೇವೆಮಾಡಲು ಒಂದಿಲ್ಲೊಂದು ತೆರನಿಂದ ಕಂಕಣಬದ್ಧರಾಗಿದ್ದವರೆಂದು ಕಂಡು ಬರುವುದು. ಆದರೆ ಮೃಣಾಲಿನಿಯೇ ಪ್ರೇಕ್ಷಕರ ಮನಸೆಳೆವಳು. ಅವಳ ಸ್ಪಷ್ಟೋಕ್ತಿ-ಕಟೂಕ್ತಿ- ಮಾರ್ಕ್ಸವಾದದ ಪಾರಾಯಣ- ಇವು ವಿಷಯದ ಕಡೆಗೆ ಆಕರ್ಷಿಸುತ್ತವೆ.

ಮೃಣಾಲಿನಿ: ಗಾಂಧಿ ಟೊಪ್ಪಿಗೆಯೂ ಬಂಡವಳ ಶಾಹಿಯ ಚಿನ್ಹ....
ಸಂಕುಚಿತ ರಾಷ್ಟ್ರೀಯತೆ ಇಲ್ಲವೆ ಮುಗಿಲಿನಾಚೆಗೆ ರೆಕ್ಕೆ ಬಡಿಯುವ ಆಧ್ಯಾತ್ಮೀಯತೆ ಈ ಎರಡೂ ವಿಷಯಗಳ ನಡುವೆ ನಮ್ಮ ಕವಿಗಳು ಹೊಯ್ದಾಡುತ್ತಾರೆ.... ಮಾರ್ಕ್ಸವಾದವು ಸ್ವಪ್ನವೆಂದು ಹೇಳುವವರು ಕಣ್ಣಿಲ್ಲದವರು.

ಈ ಮಾತುಗಳಿಂದ ಮಣಾಲಿನಿಯ ಒಲವು-ನಿಲುವು ಸ್ಪಷ್ಟವಾಗುತ್ತದೆ. ಅಲ್ಲದೆ ಅವಳಲ್ಲಿ ಎಲ್ಲರನ್ನು ಮಾರ್ಕ್ಸವಾದಕ್ಕೆ ಹೊರಳಿಸಬೇಕೆಂಬ ಪ್ರಚಾರಕ ವೃತ್ತಿಯು ಕಂಡು ಬರುತ್ತಿದೆ. ಬನಸೀಲಾಲನು ಮತ್ತು ಕೋಸಲೇಂದ್ರ ಕವಿ ಇಬ್ಬರೂ ಅವಳ ಹತ್ತಿರ ಮಾರ್ಕ್ಸವಾದದ ಪಾಠಕಲಿಯಬೇಕೆನ್ನುತ್ತಾರೆ. ಆದರೆ ಇಬ್ಬರಿಗೂ ಮಾರ್ಕ್ಸವಾದ ಬೇಕಿಲ್ಲ. ಬೇಕಿದ್ದುದು ಮೃಣಾಲಿನಿ

ಎಂಬುದು ಮೊದಲಂಕ ಮುಗಿವಷ್ಟರಲ್ಲಿ ಸ್ಪಷ್ಟವಾಗುವುದು. ಪೋಪಟ ಲಾಲನೂ ಮೃಣಾಲಿನಿಗಾಗಿ ಆಸೆಮಾಡಿದವನು.

ಎರಡನೆಯ ಅಂಕದಲ್ಲಿ ಹೆಚ್ಚಿನ ಸ್ವರೂಪ ದರ್ಶನವಾಗುತ್ತದೆ. ಸಮಾಜ ಸೇವೆಯ ಹೆಸರಿನಲ್ಲಿ ಬಡೆದಾಡುವಾಗ ಸ್ವಾರ್ಥದ ತಾರೀಖುಗಳು ಬರುವುವು. ಬನಸೀಲಾಲನಿಗೆ ಅಧಿಕಾರದ ಮೋಹ– ಚುನಾವಣೆಯಲ್ಲಿಯ ಯಶಸ್ವಿಗಾಗಿ ಏನು ಬೇಕಾದ 'ಸೇವೆ' ಮಾಡಲಿಕ್ಕೆ ತೊಡಗಿದವ. ಅವನ 'ಸೇವಾ ಕ್ಷೇತ್ರ'ದಲ್ಲಿ ಕಾಂತಿಚಂದ್ರ, ರೋಹಿಣಿ ದೇವಿಯರು ಅವನಿಗೆ ಅಡ್ಡಿಯಾದರು. ಈ ಮೊದಲು ಕಿಶನ್ ಕಿಶೋರ, ರುಕ್ಮಿಣಿ ದೇವಿಯುವರನ್ನು ಹಿಂಡಿ ದಿಲ್ಲಿ ಬಿಟ್ಟು ಓಡಿಸಿದ ಧೀರನಿವ. ಈಗ ಕಾಂತಿ ಚಂದ್ರರಿಗೆ ಕೈಹಚ್ಚಿದ್ದಾನೆ. ಬನಸಿಲಾಲರ ವ್ಯೂಹಕ್ಕೆ ಸಿಕ್ಕು ಕಾಂತಿ ಚಂದ್ರರಿಗೆ ದೈಹಿಕ–ಮಾನಸಿಕ ಬೇನೆಗಳು ತಲೆದೋರಿ ಹುಚ್ಚನ ಹಾಗೆ ಮಾಡುತ್ತಾರೆ ಈ ಪರಿಸ್ಥಿತಿ ಬಂದು ಬನಸೀಲಾಲನ ಹಾನಿ ಬಿಟ್ಟುಬಿಡುವ ನಿರ್ಧಾರಕ್ಕೆ ಬರುತ್ತಾರೆ.

ಪೋಪಟಲಾಲನು ಅವಮಾನಿತ ನಾಗಿದ್ದಾನೆ, ಮೃಣಾನಿಲಿಯಿಂದ. ಕೋಸಲೇಂದ್ರ ಆಕರ್ಷಿತನಾಗಿದ್ದಾನೆ.

ಪೋಪಟನೂ ಕವಿಯಾಗಿ ಹೀಗೆ ಕವನ ಬರೆದಿದ್ದಾನೆ. ಮೃಣಾಲಿನಿಯನ್ನು ಕಣ್ಣು ಮುಂದೆ ಇಟ್ಟುಕೊಂಡು :

" ಗರಿದೆರೆದರೆ ನವಿಲು, ಬಾಯ್ದೆರೆದರೆ ಹುಯಿಲು.
ಕಣ್ದೆರೆದರೆ ಹರಿಣ, ಕಿವಿದೆರೆದರೆ ಹುಲಿ
ದೂರದಿಂದ ವಿಮಾನ, ಹತ್ತಿರ ಹೋದರೆ ಜೆಟ್ ಬಾಂಬರ್
ದೂರದಿಂದ **New Dawn;** ಹತ್ತಿರದಿಂದ **Amazon**
ದೂರದಿಂದ ಚಿತ್ರಾಂಗದೆ, ಹತ್ತಿರದಿಂದ ಹಿಡಿಂಬೆ
ದೂರದಿಂದ ಮಾಥೇರಾನ್, ಹತ್ತಿರದಿಂದ ಬೊಂಬೆ."

ಕೋಸಲೇಂದ್ರನ ಕವಿತೆಯಿದು.

" ನಾನು ಕವಿ, ನಾನು ಪ್ರವಾದಿ ನೀನೆಂದು ಮಾರ್ಕ್ಸವಾದಿ
ಕವಲೊಡೆದಿವೆ ನಮ್ಮ ಹಾದಿ, ನೀನು ನಮ್ಮ ನಾ ಬುನಾದಿ
ಕವಲೊಡೆದರು ಕಲೆಯಬಹುದು ಭಿನ್ನವಿದ್ದು ಬೆರೆಯುಬಹುದು."

ಇದೇ ಮಾತಿನ ಅರ್ಥವು ಮೃಣಾಲಿನಿಯ ಜೀವನದಲ್ಲಿ ಆಗಿದೆ. ಕೋಸಲೇಂದ್ರನ ಸಾಮೀಪ್ಯದಿಂದ ಪಾಠ ಹೇಳುವ ಸಂದರ್ಭಗಳು ಹೆಚ್ಚಾಗಿ ತನ್ನಲ್ಲಿಯ 'ಕೊರತೆ'ದ ಅರಿವಾಗಿದೆ ಅವಳಿಗೆ. ಸ್ನೇಹದ ಹೆಸರು. ಪ್ರೀತಿಯ ಆಸೆ " ಸದ್ಯಕ್ಕೆ ಸ್ನೇಹವೆಂದು ತಿಳಿದು ಸಾಗೋಣ; ನಿನ್ನ ಗೆಳೆತನ ಅದು ಹೇಗೋ ನನ್ನ ಹೃದಯವನ್ನು ಮುಟ್ಟಿದೆ. ಮಾರ್ಕ್ಸವಾದಿಯದು ಸಂಪೂರ್ಣ ವ್ಯಕ್ತಿತ್ವವೆಂದು ತಿಳಿದಿದ್ದೆ. ಆದರೆ ನೀನು ಈಗ ಅದರ ಭಾಗವಾಗಿದ್ದೀ." ಕೋಸಲೇಂದ್ರನ ನುಡಿ ಹೀಗೆ: " ಅಭ್ಯಾಸಕೂಟದ ಮೂಲಕ ನಿನ್ನ ಭಾಷೆ ನನ್ನ ನಾಲಿಗೆಯ ಮೇಲೆ ಕೂತಿದೆ. ಇನ್ನು ಬರುಬರುತ್ತ ನೀನು ಕವಿಯಾಗಿ ನಾನು ಮಾರ್ಕ್ಸವಾದಿಯಾಗುವ ಸಂಭವವದೆ. "

ಮೊದಲಂಕಿನ ಮೃಣಾಲಿನಿಯೂ ಬದಲಾಗಿದ್ದಾಳೆ. ಕೋಸಲೇಂದ್ರನು ಬದಲಾಗಿದ್ದಾನೆ ಹೃದಯವಂತಿಕೆ ಮಣಾಲಿನಿಗೆ ಬರಲಿದೆ; ವಿಚಾರಧಾರೆಯ ಅಲಗು ಹರಿತವಾಗುತ್ತಿದೆ ಕವಿ ಕೋಸಲೇಂದ್ರನಲ್ಲಿ. ಇದೀಗ ಕೋಸಲೇಂದ್ರನ ಕೈ ಜೋರಾಗುತ್ತಿದೆ :

ಕೋಸಲೇಂದ್ರ : ಮಾನವ ಜನಾಂಗಕ್ಕೆ ಬುದ್ಧಿಯ ಇತಿಹಾಸವೊಂದು ಇದ್ದಂತೆ ಪರಾಬುದ್ಧಿಯ ಇತಿಹಾಸವೂ ಇದೆ, ಮೃಣಾಲಿನಿ. ವಿಜ್ಞಾನಿಯ ಅನುಭವದೊಂದಿಗೆ ಅನುಭಾವಿಯ 'ವಿಜ್ಞಾನ'ವೂ ಇದೆ.

ಮೃಣಾಲಿನಿ ಕೋಸಲೇಂದ್ರನನನ್ನು ಒಪ್ಪಿಕೊಂಡು ಅವನ ಬೆನ್ನು ಬಿದ್ದಿದ್ದಾಳೆ. ಇಬ್ಬರೂ ಕೂಡಿ ದೂರದ ಹಳ್ಳಿಗೆ ಹೊರಟಿದ್ದಾರೆ. ಕೋಸಲೇಂದ್ರನು ಮೃಣಾಲಿನಿಗೆ ದೇವರನ್ನು ತೋರಿಸುವ. ಕಠೋರ ಜೀವನ ನಡಿಸಿದ ಮಾರ್ಕ್ಸವಾದಿ ಮೃಣಾಲಿನಿಯು ಈಗ ಹೃದಯುವರಳಿದ ಹೆಣ್ಣು ಆಗಿದ್ದಾಳೆ. ಅದಕ್ಕೆ ಅವಳಿಗೆ ಬಿಸಿಲಿನಲ್ಲಿ ನಡೆವುದು ಅಸಾಧ್ಯವಾಗತೊಡಗಿದೆ. ಹಸಿವು ತಡೆಯದಾಗುತ್ತಿದೆ. ದಾರಿಯಲ್ಲಿ ರೈತ ಕೊಟ್ಟ ರೊಟ್ಟಿ ಚಟ್ಣಿ ತಿನ್ನುತ್ತಾಳೆ. ಅವನ ತ್ಯಾಗವನ್ನು ಕಂಡು ಹೊಸ ದೃಷ್ಟಿಪಡೆಯುತ್ತಾಳೆ. ಮೃಣಾಲಿನಿ ಎಷ್ಟು ಬದಲಾಗಿದ್ದಾಳೆ ಎಂಬುದಕ್ಕೆ ಈ ಮಾತುಗಳು ಸಾಕು :

ಮೃಣಾಲಿನಿ : (ಕೋಸಲೇಂದ್ರನಿಗೆ) ನಿನಗೆ ಒಮ್ಮೆ ಪಾಠವನ್ನು ಕಲಿಸಿದ ತಪ್ಪಿಗೆ ನಿರಂತರವೂ ಈಗ ನಾನು ಕಲಿಯಬೇಕಾಗಿದೆ. ಈ ಧರ್ಮಕ್ಕೆ ನಾನು ಒಪ್ಪಿದೆ. ನಿನ್ನ ಮತದ ಮೊದಲನೆಯ ಶಿಷ್ಯಳು ನಾನು. ನನ್ನ

ಉತ್ಸಾಹವನ್ನು ಕೋಸಲೇಂದ್ರನ ಬಾಳಿಗೆ ಜೊತೆಯಾಗಿಸುತ್ತೇವೆ. ಅವನ ದರ್ಶನವು ನನ್ನ ಹಣೆಗಣ್ಣಾಗಲಿ. ಇದೇ ಪಾಣಿಗ್ರಹಣ.

ಕೋಸಲೇಂದ್ರ ಮೃಣಾಲಿನಿಯರು ಮದುವೆಯಾಗುತ್ತಾರೆ. ಕಾಶಿಂಚಂದ್ರ ಕಿಶನ್ ಕಿಶೋರರು ಆಧ್ಯಾತ್ಮಕ್ಕೆ ಹೊಂದಿಕೊಳ್ಳಬೇಕೆಂದು ಅರುಣಾಚಲಕ್ಕೆ ಹೋಗುತ್ತಾರೆ. ಬನಸೀಲಾಲನು ಎಲ್ಲರನ್ನು ಮೋಸಮಾಡಿ ಕೊನೆಗೆ ತಾನೇ ವಂಚಿತನಾಗುತ್ತಾನೆ. ಚುನಾವಣೆಯಲ್ಲಿ ಅವನಿಗೆ ಆಸ್ಪದವೇ ದೊರೆಯುವುದಿಲ್ಲ. ಪೋಪಟಲಾಲನಿಗೆ ಜ್ಞಾನೋದಯವಾಗುತ್ತದೆ.

ಹೊಸ ಬಾಳಿನ ಅರುಣೋದಯವಾಯಿತೆಂದು ತೋರುವುದಕ್ಕೆ ಕೋಸಲೇಂದ್ರ–ಮೃಣಾಲಿನಿಯವರ ಜತೆ ಜೀವನಕ್ಕೆ ಜೀವ ಹೂವೊಂದು ನನೆಯೊಡೆಯುತ್ತದೆ. ಅದೇ ಈ ನಾಟಕದ ಕೊನೆ. ಯುಗಾಂತರವಾಗಿರುತ್ತದೆ.

ನಾಟಕವು ಒಂದು ತಾತ್ವಿಕ ತಳಹದಿಯನ್ನು ಅವಲಂಬಿಸಿದ್ದುದರಿಂದ ಅಲ್ಲಲ್ಲಿ ತತ್ವವಿವೇಚನೆಯ ಭಾಗ ಬಂದು ಇನ್ನು ಸಂಭಾಷಣೆಗಳು ಚರ್ಚೆಯ ಸ್ವರೂಪದಲ್ಲಿ ಉಳಿದಿವೆ. ಆದರೆ ಅದು ನಾಟಕಕ್ಕೆ ಪೋಷಕವಾಗಿಯೆ ಇದೆ.

ಕಾವ್ಯವೇ ಮೂಲ ಪ್ರಕಟನೆಯ ಮಾಧ್ಯಮವಾಗಿದೆಯೆಂದು ನಾಟಕದಲ್ಲಿಯೂ ಕಂಡುಬರುವುದು. ಆ ಮಾತು ವಿನಾಯಕರ ಯಾವ ಸಾಹಿತ್ಯ ಪ್ರಕಾರವನ್ನು ನೋಡಿದರೂ ಮನವರಿಕೆಯಾಗುತ್ತದೆ. ಹೊಸ ಮನ್ವಂತರದ ಉದಯ ಸೂಚಿಸುವ ನಾಟಕವು ಇದು: ಯುಗಾಂತರ. ಈ ಬಗೆಯ ಯುಗಾಂತರಗಳನ್ನು ತೋರುವುದು ವಿನಾಯಕರ ಕಾದಂಬರಿಯು.

---

## ೬

# ಕಾದಂಬರಿ

## ಸಮರಸವೇ ಜೀವನ

ಈ ಕಾದಂಬರಿಗೆ ಈಗಿನ ಹೆಸರು ಸಮರಸವೇ ಜೀವನ. ಅದನ್ನು ಅದು ಸೂಚಿಸುವುದು. ಈ ಮಹಾ ಕಾದಂಬರಿಯು ಭಾಗ ಭಾಗವಾಗಿ ಪ್ರಕಟವಾಯಿತು. ೨೦ ವರುಷಗಳ ಕಾಲದಲ್ಲಿ ರೂಪುಗೊಂಡಿತು. ಇಪ್ಪತ್ತು ವರುಷಗಳ ಹಿಂದೆ 'ಇಜ್ಜೋಡು' ಎಂದು ಹೊರಬಿದ್ದ ಕಾದಂಬರಿ ಇಂದು ಸಮರಸವೇ ಜೀವನವಾಗಿ ಪೂರ್ತಿಗೊಂಡಿದೆ. ಇದು ಒಂದು ದೊಡ್ಡ ತತ್ವ ವನ್ನು ಹೇಳುವುದು. ಪ್ರಾರಂಭದಲ್ಲಿ ಯಾವುದೂ 'ಇಜ್ಜೋಡು' ಆಗಿದ್ದರೂ ವಿಕಾಸವಾದಂತೆಲ್ಲ ಅದು 'ಸಮರಸವೇ ಜೀವನ'ವಾಗುವುದು, ಎಂದು ಸಾರುವುದು.

ಡೆಮಿ ಅಷ್ಟಪತ್ತ್ರದ ೧೨೬೮ ಪುಟಗಳಷ್ಟು ಬೆಳೆದ ಕಾದಂಬರಿಯಿದು. ಇದರಲ್ಲಿ ಒಂಬತ್ತು ಪರಿಗಳು. 'ಸರ್ವಾಂಗಪೂರಿತ'ವೆಂದು ಇದರ ಬಣ್ಣನೆ. ಎರಡು ತಲೆಮಾರಿನ ಜೀವನ ಚಿತ್ರಣ ಇಲ್ಲಿದೆ. ಮಹತ್ವದ ಪಾತ್ರಗಳಾಗಿ ಬರುವ ನರಹರಿ-ಕುಸುಮಾ, ಶೀನು-ಸುಶೀಲಾ, ವಿಷ್ಣು-ಪ್ರಮೀಲೆ. ಇವರ ಪ್ರಗತಿ, ಅನುತಾಪ, ಪರಿವರ್ತನ ವಿಕಾಸ-ಇವು ಈ ಕಾದಂಬರಿಯಲ್ಲಿ ಮೂಡಿವೆ. ಈ ಜತೆಜೀವಿಗಳ ಬಾಳಿನಲ್ಲಿ ಹಾಸು ಹೊಕ್ಕಾಗಿ ಬರುವ ಅನೇಕ ಆನುಷಂಗಿಕ ವ್ಯಕ್ತಿಗಳು.

ಈ ಕಾದಂಬರಿ ಆರು ಭಾಗಗಳಲ್ಲಿ ರೂಪುಗೊಂಡಿದೆ. ಮೊದಲನೆಯ ಭಾಗ ಇಜ್ಜೋಡು. ಇಲ್ಲಿ ಕತೆಯ ಮೂಲ ನಾಯಕರ ಮನೋಧರ್ಮವನ್ನು ಕಾಣುತ್ತೇವೆ. ವಾತಾವರಣದಲ್ಲಿ ಕಂಡು ಬಂದ ವಿರಸವು ಎದ್ದು ಕಾಣುತ್ತದೆ. ಈ ವಿರಸದಲ್ಲಿಯೂ ಹೇಗೆ ರಸೋತ್ಪತ್ತಿ ಯಾಗಬಲ್ಲುದೆಂಬುದನ್ನು ಅಂತರ ಪ್ರಾಂತೀಯ ಜೀವನದ ದೃಷ್ಟಿಯ ಮೂಲಕ ಕಾಣುತ್ತೇವೆ. ಅಂತಃ

ಸತ್ವ ಎಂಬುದು ಎರಡನೆಯಭಾಗ. ವಿರಸ ಇನ್ನೂ ಹೆಚ್ಚಿ ಕುಸುಮಾ ನರಹರಿಯರು ಪರೀಕ್ಷಾ ಕಾಲವನ್ನು ದಾಟುತ್ತಾರೆ. ಪ್ರೀತಿಯ ಯೋಗ ಮಾಯೆಯು ಮೂರನೆಯಭಾಗ. ಇದರಲ್ಲಿ ಕಥಾನಕದ ಮೂರು ಮುಖ್ಯ ಜತೆಗಳು ರೂಪುಗೊಳ್ಳುತ್ತವೆ. ನಾಲ್ಕನೆಯ ಭಾಗವಾದ 'ಏರಿಳಿತ'ವು ಅರ್ಥ ಸೂಚಿಯಾಗಿದೆ. ಸಮುದ್ರಯಾನವು ಐದನೆಯ ಭಾಗ. ಭಾರತ ವಿಲಾಯತಿಗಳ ಸಂಘರ್ಷದಿಂದ ಒಂದು ವಿಷ ಜನಿಸಿದೆ. ಆದರೂ ಸಮರಸವು ತಲೆಯೆತ್ತಿದೆ. ನಿರ್ವಹಣವು ಕೊನೆಯ ಭಾಗ. ಇಲ್ಲಿ ವ್ಯಕ್ತಿಗಳು ತಮ್ಮ ಸೋಕ್ಷ ಮೋಕ್ಷಗಳನ್ನು ಕಂಡುಕೊಳ್ಳುತ್ತಾರೆ. ವ್ಯಕ್ತಿತ್ವವು ಅರಳುತ್ತದೆ.

ಕಾದಂಬರಿಯು ಸಾಹಿತ್ಯ ಪ್ರಕಾರವಾದರೂ ಚರಿತ್ರೆಯ ಅಂಶವು ಅದರಲ್ಲಿ ಹೆಚ್ಚಿರುತ್ತದೆ. ಅಲ್ಲಿಯ ಪಾತ್ರಗಳು ಕಾಲ್ಪನಿಕವೆಂದು ಕಂಡು ಬಂದರೂ ಅವುಗಳ ಮಾದರಿ ಸಜೀವವಾಗಿರುತ್ತವೆ. ಜೀವನದ ಚಿತ್ರಣವಾಗುವುದರಿಂದ ಅನೇಕ ಸಂಗತಿ ಸನ್ನಿವೇಶಗಳು ಐತಿಹಾಸಿಕವಾಗಿ ಗುರುತು ಹತ್ತುತ್ತವೆ. ಅದರಿಂದ ಓದುಗರಿಗೆ ಆತ್ಮೀಯತೆ ಉಂಟಾಗುತ್ತದೆ. ವಸ್ತುನಿಷ್ಠವಾಗಿ ನಿರೂಪಣೆ ಮಾಡಿದ್ದರೂ ವ್ಯಕ್ತಿನಿಷ್ಠವಾದ ಅನೇಕ ಸಂಗತಿಗಳು, ಬರೆಹಗಾರನ ಬೇಕು-ಬೇಡಗಳು, ಆಸೆ-ಆಕಾಂಕ್ಷೆಗಳು ಒಳಹೊಕ್ಕಿರುತ್ತವೆ. ಆ ದೃಷ್ಟಿಯಿಂದ ಅಷ್ಟು ಮಟ್ಟಿಗೆ ಅದು ಆತ್ಮಚರಿತಾತ್ಮಕವಾಗುತ್ತದೆ. ಕಾದಂಬರಿಯು ಚರಿತ್ರೆಯೂ ಅಹುದು; ಆತ್ಮಚರಿತ್ರೆಯೂ ಅಹುದು. ಈ ಎರಡೂ ದೃಷ್ಟಿಯಲ್ಲಿ ಈ ಕಾದಂಬರಿಯನ್ನು ನೋಡಿದರೆ ಕಳೆದ ಐವತ್ತು ವರುಷಗಳ ಐತಿಹಾಸಿಕ ಘಟನೆಗಳೂ ವಿನಾಯಕರ ಜೀವನದಲ್ಲಿಯ ಕಳೆದ ಮುವ್ವತ್ತು ವರುಷಗಳಲ್ಲಿ ಘಟಿಸಿದ ಅನೇಕ ಸಂಗತಿಗಳೂ ಒಡೆದು ಕಾಣುವುವು.

ಅನೇಕ ವ್ಯಕ್ತಿಗಳು ಒಂದೆಡೆ ಬರುವುದರಿಂದ ಇದು ಸಮಾಜದ ಕನ್ನಡಿಯಂತಾಗಿ ಇಲ್ಲಿ ಜನಜೀವನದ ಪಡಿನೆಳಲು ಕಾಂಬುದು. ಒಂದೊಂದು ವ್ಯಕ್ತಿ ಒಂದೊಂದು ತರಹ. ಒಂದೊಂದರಲ್ಲಿ ಒಂದು ಒಳ್ಳೆಯ ಗುಣ ಕಂಡು ಬಂದರೆ ಹಲವಾರು ದುರ್ಗುಣಗಳು. ಅವುಗಳನ್ನು ಹೊಂದಿಸಿಕೊಂಡು ಬಾಳಬೇಕಾದಾಗ ಒಂದೊಂದು ತತ್ವದ ನಿದರ್ಶನ. ಜೀವನ ಸಮರ್ಥನೆಗಾಗಿ ತತ್ವ ಬಂದು ತತ್ವವೇ ಇದರ ಜೀವಾಳವೆಂದು ತಿಳಿಯದ ಹಾಗೆ ಮಾಡುವುವು. ತತ್ವಗಳಾಗಲೀ ವಿಚಾರ ಪ್ರಣಾಲಿಗಳಾಗಲೀ ವ್ಯಕ್ತಿಯ ಜೀವನಕ್ಕೆ ಅನು

ಗೋಲುಗಳು. ಆನುವಂಶಿಕತೆಯು ಮೂಲಕ – ವಾತಾವರಣದ ಮೂಲಕ ವ್ಯಕ್ತಿಯ ಬೆಳಿಗೆಯಾಗುವುದರಿಂದ ಯಾವುದೇ ಒಂದು ತತ್ವವು ಸಹಾಯ ಕಾರಿಯಾಗುವುದಿಲ್ಲ. ಅವಕ್ಕಾಗಿ ತೋಟದಲ್ಲಿಯ ಹೂವೆತ್ತುವ ಹಾಗೆ ಅಲ್ಲಿಂದ ಒಂದು ಇಲ್ಲಿಂದ ಮತ್ತೊಂದು ಹೀಗೆ ಆರಿಸಿಕೊಂಡು ಒಂದೊಂದು ವ್ಯಕ್ತಿಯೂ ಒಂದೊಂದು ದಾರಿಹಿಡಿವುದು. ಆ ಮಟ್ಟಿಗೆ ಆ ವ್ಯಕ್ತಿಯದೇ ಒಂದು ಜೀವನ ತತ್ವಜ್ಞಾನ. ಅದು ಸಾರ್ವತ್ರಿಕ-ಸಾರ್ವಕಾಲಿಕವಾಗುವ ಯೋಗ್ಯತೆಯಿದ್ದರೆ, ಅದನ್ನು ಸಮಾಜ ಒಪ್ಪಿದರೆ ಆ ವ್ಯಕ್ತಿಯು ದೊಡ್ಡ ವ್ಯಕ್ತಿಯಾಗುವುದು. ತತ್ವಜ್ಞಾನವು ಒಂದು ಮಾದರಿಯಾಗುವುದು. ಇಲ್ಲದಿದ್ದರೆ, ಸಂಧಿಸಾಧಕ, ಕಾರ್ಯ ಸಾಧಕನೆಂದೂ ಹೆಸರು ಪಡೆದು ಆ ವ್ಯಕ್ತಿಯು ಓದುಗನ–ಹಾಗೂ ಸಾಮಾಜಿಕರ ಜಿಗುಪ್ಸೆಗೆ ಗುರಿಯಾಗುವುದು.

ಹೀಗೆ ವಿಭಿನ್ನ ಸ್ವಭಾವದ ವ್ಯಕ್ತಿಗಳಿರುವುದರಿಂದಲೇ ಅಲ್ಲಲ್ಲಿ ವಿರಸ ವುಂಟಾಗುವುದು. ವಿರಸವೇ ಜೀವನ. 'ವಿಕೃತಿರ್ಜವನ ಮುಚ್ಯತೆ" ಈ ವಿಕೃತಿಗಳನ್ನೆಲ್ಲ ವಿಂಗಡಿಸಿ ಅವುಗಳಲ್ಲಿ ಸಾಮಾನ್ಯ ರಸವನ್ನು ಕಂಡುಹಿಡಿದು ಸಮಾನ ಧರ್ಮವನ್ನು ಜೀವನದ ಸಾಮರಸ್ಯವನ್ನು ತೋರುವುದೇ ಕಲಾ ಕೃತಿ. ಸಮರಸವೇ ಜೀವನ, ಎಂದು ಸಾರುವ ಕಲಾಕೃತಿ ಈ ಕಾದಂಬರಿ. ಗಾತ್ರದಲ್ಲಿ ದೊಡ್ಡದಾದ ಕಾದಂಬರಿಯು ಸ್ಥೂಲವಾಗಿ ವಿವರಣೆ ಪಡೆದಿಲ್ಲ. ವಿವರವಾದ ಸೂಕ್ಷ್ಮತೆಗಳುಳ್ಳ ಕಾದಂಬರಿಯಾಗಿದೆ. ಏಕ ಸೂತ್ರತೆಯು ಇರುವುದರಿಂದ ಇದು ಇಂದು ಮಹಾಕಾದಂಬರಿ ಎನ್ನಿಸಿದೆ. ಇಲ್ಲದಿದ್ದರೆ ಆರು ಸ್ವತಂತ್ರ ಆದರೂ ಅದೇ ವ್ಯಕ್ತಿಗಳ ಇತಿಹಾಸಗಳ ಕಾದಂಬರಿ ಯೆಂದಾಗುತ್ತಿತ್ತು. ಕಾಲ ಬದಲಾದರೂ ಕ್ಷೇತ್ರ ಬದಲಾದರೂ ವ್ಯಕ್ತಿಗಳು ಬದಲಾದರೂ ಸಂನ್ನಿವೇಶಗಳು ಬದಲಾದರೂ ಮೊದಲಿನಿಂದ ತುದಿಯವರೆಗೆ ಎಳದುಕೊಂಡು ಹೋಗವ ಎಳೆಯು ಒಂದು: ಅದು ಸಮರಸವೇ ಜೀವನ. ವಿವರವಾದ–ವ್ಯಾಪಕವಾದ, ತತ್ವದ ತಿರುಳಿನ ಚರ್ಚೆಯುಳ್ಳ, ಮನೋ ವಿಕಾರಗಳ ವ್ಯಾಪಾರಗಳನ್ನು ಅಳೆಯುವ ಜನಜೀವನದ ವಿಭಿನ್ನ ಹಂತ ಗಳನ್ನು ಅಳೆದುತೋರುವ, ಅನೇಕ ರಸಗಳಿಗೆ ಆಗರವಾಗಿ ವಿರಸ ಹುಟ್ಟಿದ ಸಂಗತಿಗಳನ್ನು ಸರಸಮಾಡಿ ತೋರಿ, ಕೊನೆಗೆ 'ಸಮರಸವೇ ಜೀವನ'ವೆಂಬ ತತ್ವವನ್ನು ತ್ರಿಕಾಲಾಬಾಧಿತವಾಗಿ ಸಾರಿದ ಮಹಾ ಕಾದಂಬರಿಯಿದು.

ಕಾವ್ಯ ನಾಟಕಗಳಲ್ಲಿ ಒಂದೊಂದು ದೃಷ್ಟಿಯಲ್ಲಿ ಕೇಂದ್ರೀಕೃತವಾಗಿ ಕಂಡ ವಿನಾಯಕರ ಸೃಷ್ಟಿಯು ಇಲ್ಲಿ ಇಡಿ ವಿಶ್ವಕ್ಕೆ ತೆಕ್ಕೆಬಿದ್ದು ವಿಶ್ವವನ್ನು ಹಿಡಿಯಲ್ಲಿ ತಂದು ತೋರಿದೆ. ಹಿಡಿಯಲ್ಲಿದ್ದುದನ್ನು ಹಿಡಿದರೆ ವಿಶ್ವವು ಕಂಡೀತು. ಹಿಡಿಯಲಾರದೆ ಹೋದರೆ, ದೃಷ್ಟಿ ತಾಕೀತು. ದೃಷ್ಟಿಯಲ್ಲಿ ಹಿಡಿದ ಸೃಷ್ಟಿಯನ್ನು, ಜನಜೀವನವನ್ನು ವಿಮರ್ಶಾತ್ಮಕವಾಗಿ ತೋರಿದ ಕಾದಂಬರಿಯಿದು. ಇದನ್ನು ತಿಳಿದುಕೊಳ್ಳಲು ವಿನಾಯಕರ—ಕವಿಯ ದೃಷ್ಟಿಪಡೆಯಬೇಕು. ಕವಿಯ ದೃಷ್ಟಿ ಹೇಗಿರಬೇಕು. ಅದನ್ನು ವಿಮರ್ಶಿಸಿಯೇ ನೋಡಬೇಕು.

---

## ೭

# ವಿಮರ್ಶೆ–ಪ್ರಬಂಧ

| | |
|---|---|
| ಇಂದಿನ ಕನ್ನಡ ಕಾವ್ಯದ ಗೊತ್ತುಗುರಿಗಳು | ಸಾಹಿತ್ಯದಲ್ಲಿ ಪ್ರಗತಿ |
| ಚೆಲುವಿನ ನಿಲುವು | ಸಮುದ್ರದಾಚೆಯಿಂದ |
| ಜೀವನ ಪಾಠಗಳು | ಇಂದಿನ ಕರ್ನಾಟಕ |

"ಸಾಹಿತ್ಯದಲ್ಲಿ ಪ್ರಗತಿ' ಎಂಬ ಸಂಕಲನವು ೧೯೪೪ ರಲ್ಲಿ ಪ್ರಕಟವಾಯಿತು. ಇದರಲ್ಲಿ ಏಳು ನಿಬಂಧಗಳಿವೆ. ೧. ವಿಮರ್ಶೆಯ ರೀತಿ ನೀತಿಗಳು. ೨. ಕಾವ್ಯದ ದ್ವಾದಶ ಸೂತ್ರಗಳು. ೩. ಕಾವ್ಯದಲ್ಲಿ ಮಹೋನ್ನತಿ. ೪. ರಾಷ್ಟ್ರೀಯ ಸಾಹಿತ್ಯ ನಿರ್ಮಾಣದ ರೂಪ-ರೇಷೆ. ೫. ಸಾಹಿತ್ಯದಲ್ಲಿ ಪ್ರಗತಿ. ೬ ಕಾವ್ಯದ ಎರಡು ಮಾದರಿಗಳು ೭. ಪ್ರಗತಿಪರ ಕವಿ ಶೆಲ್ಲಿ.

ಹಳತು ಹೊಸತನ್ನು ಮೂಡು–ಪಡುವಣ ದರ್ಶನಗಳನ್ನು ಬೆರಸಿ ಮಾತ್ರ ನವೀನ ಸಂಸ್ಕೃತಿಯೊಂದನ್ನು ನಾವು ಕಟ್ಟುವುದು ಸಾಧ್ಯವಿದೆ. ಈ ನಾವೀನ್ಯವು ಎಲ್ಲ ರಂಗಗಳಲ್ಲಿ ಬರಬೇಕಾಗಿದೆ. ಇಂತಹ ಹೊಸ ಜೀವನ ಉದಯವಾಗಬೇಕಾದರೆ ಎಂತಹ ಸಾಹಿತ್ಯ ನಿರ್ಮಾಣವಾಗಬೇಕು ? ಅದು ಯಾವ ದಾರಿ ಹಿಡಿಯಬಹುದು. ಇವೇ ಮೊದಲಾದ ವಿವೇಚನೆಯು ಈ ಸಂಕಲನದಲ್ಲಿ ಇದೆ. ಆದ್ದರಿಂದ ಈ ಸಂಕಲನಕ್ಕೆ ಮಹತ್ವ ಹೆಚ್ಚಿದೆ.

ಸಾಹಿತ್ಯದಲ್ಲಿ ಪ್ರಗತಿ ಇದು ಯಾವ ಮಾತುಗಳಿಂದ ಕಂಡುಬರುವುದು. ಅಂತರ್ಮುಖತೆ ಹಾಗೂ ಬಹಿರ್ಮುಖತೆಗಳು ಕೂಡಿಯೇ ವ್ಯಕ್ತಿಯ ಹಾಗೂ ಸಮಾಜದ ಜೀವನವನ್ನು ಹಿಗ್ಗಿಸದ ಹೊರತು ಸರ್ವತೋಮುಖ ಪ್ರಗತಿಯಾಗಲಾರದು. ಅಂತರ್ಮುಖತೆ, ಬಹಿರ್ಮುಖತೆ, ಮಹೋನ್ನತಿ ಹಾಗೂ ಪ್ರಗತಿ ಎಂದರೇನೆಂಬುದನ್ನು ಈ ಸಂಕಲನವು ಸ್ಪಷ್ಟೀಕರಿಸುತ್ತದೆ. 'ವಿಮರ್ಶೆಯ ರೀತಿನೀತಿ'ಯು ೧೯೩೧ರಲ್ಲಿ ಪ್ರಕಟವಾಗಿತ್ತು; ಅದರಲ್ಲಿ ಬಂದ ಮಾತುಗಳಿವು :

"ನಾವು ಎರಡು ಅಮೌಲ್ಯವಾದ ಸಾಧನೆಗಳನ್ನು ಕಳೆದುಕೊಂಡಿದ್ದೇವೆ. ಒಂದು ಸಾಮ್ರಾಜ್ಯ; ಇನ್ನೊಂದು ಮಹಾಕಾವ್ಯ. ಈಗ ನಾಡು

ಸಂಕುಚಿತವಾದರೂ ಸಾಹಿತ್ಯಕ್ಕೆ ಚ್ಯುತಿಯಿಲ್ಲ. ಏಕೆಂದರೆ ಸಾಹಿತ್ಯದ ಹಿರಿಮೆಯು ಕ್ಷಿತಿಯ ಗಾತ್ರದ ಮೇಲೆ ನಿಂತಿರುವುದಿಲ್ಲ. ಆಧುನಿಕ ಕಾವ್ಯವು ವಿಶೇಷವಾಗಿ ಭಾವಗೀತೆಗಳ ಕಾವ್ಯವಾಗಿವೆ. ಅಲ್ಲದೆ ಮಹಾಕಾವ್ಯದ ಪರಂಪರೆಯು ಇಂದಿಗೆ ಅನುಚಿತವೂ ಆಗಿದೆ. ಆಧುನಿಕ ಕಾವ್ಯವು ವಸ್ತುಕವಲ್ಲ; ಹೆಚ್ಚು ಹೆಚ್ಚಾಗಿ ವರ್ಣಕವಾಗಿದೆ. ಸಾಹಿತ್ಯದ ಅಜರಾಮರವಾದ ತತ್ವಗಳನ್ನು ರಕ್ಷಿಸಿ ಬೆಳಗಿಸುವುದೇ ವಿಮರ್ಶೆಯ ಆದ್ಯಕರ್ತವ್ಯವಾಗಿದೆ. ವಿಮರ್ಶೆಗೂ ಒಂದು ನಿರ್ಮಾಣ ಶಕ್ತಿಯಿದೆ. ಉಳಿದ ಯಾವ ಸಾಹಿತಿಗೂ ಬೇಕಾಗುವ ಆತ್ಮಪ್ರತೀತಿಯು ವಿಮರ್ಶಕನಿಗೂ ಬೇಕು. ವಿಮರ್ಶೆಯಲ್ಲಿ ಹಲವಾರು ದೃಷ್ಟಿ. ಸಪ್ರಮಾಣ, ಸಪ್ರಮೇಯ, ತುಲನಾತ್ಮಕ, ಐತಿಹಾಸಿಕ ತಾತ್ವಿಕ; ಎಂಬ ಪ್ರಕಾರಗಳು. ಹೆಸರನ್ನು ಸಾರ್ಥಕವಾಗಿಸುವ ವಿಮರ್ಶಕನನ್ನು ಯಾವ ನೀಚ ಭಾವನೆಯೂ ಪ್ರೇರಿಸಲಾರದು. ವಿಮರ್ಶಕನೆಂದರೆ ಅಪ್ರಿಯ ಸತ್ಯವಾದಿ. ಕನ್ನಡ ಸಾಹಿತ್ಯಕ್ಕೇನು ವಿಮರ್ಶೆ ಹೊಸದಲ್ಲ. ಕವಿಗಳಲ್ಲದ ವಿಮರ್ಶಕರು ಅನೇಕರಿರಬಹುದು. ವಿಮರ್ಶಕರಲ್ಲದ ಕವಿಗಳು ಶೀರವಿರಲ."

"ಕಾವ್ಯದ ದ್ವಾದಶ ಸೂತ್ರಗಳು'' ಯಾವು? ಅನುಭವ, ಅನುಭವದ ವಾಹನ, ಸಾಹಿತ್ಯ ಪ್ರಕಾರ, ಶೈಲಿ, ಅಲಂಕಾರ, ಛಂದಸ್ಸು, ಅನುಭವವನ್ನು ಕೃತಿಗಿಳಿಸುವ ಶಕ್ತಿ. ನಿರೂಪಣೆ, ವ್ಯಕ್ತಿ ಸಿಷ್ಠತೆ, ಕವಿಯ ಮನಸ್ಸಿನ ಸ್ಥಿತಿ-ಗತಿ ವಿಮರ್ಶೆ ತಿದ್ದಿತಿಡುವಿಕೆ.

'ಮಹೋನ್ನತಿ' ಎಂದರೇನು ಯಾವ ರೀತಿಯಿಂದ ಮಹೋನ್ನತಿ ಪ್ರಕಟವಾದರೂ ಅದರಲ್ಲಿ ಪ್ರತಿಭೆ ಇರಬೇಕು. ಅರ್ಥಪೂರ್ಣವಾಗಿರಬೇಕು. ಕಿರಿದರೊಳು ಪಿರಿದರ್ಥಮಂ ಹೇಳಬೇಕು.

ರಾಷ್ಟ್ರೀಯ ಸಾಹಿತ್ಯ ನಿರ್ಮಾಣವಾಗಬೇಕಾದರೆ ರಾಷ್ಟ್ರೀಯ ಮನೋವೃತ್ತಿ ಬೆಳೆಯಬೇಕು. ಪುಸ್ತಕ ಓದುವವರು ಅವುಗಳನ್ನು ಕೊಂಡು ಓದಬೇಕು. ಸಾಹಿತ್ಯದಲ್ಲಿ ಪ್ರಗತಿ ಎಂದರೇನು? ಸರ್ವತೋಮುಖ ಬೆಳಿಗೆಯನ್ನು ಪಡೆದು ಸಾರ್ವಕಾಲಿಕವಾಗಿರುವ ಗುಣಗಳನ್ನು ಪಡೆದು ಸಾಮಾಜಿಕರಿಗೆ ಸ್ಫೂರ್ತಿಕೊಡುವಂತಾದರೆ ಆ ಸಾಹಿತ್ಯ ಪ್ರಗತಿ ಮುಖ ಪಡೆದಿದೆ.

ಹೀಗೆ ಈ ಸಂಪುಟದಲ್ಲಿ ಸಾಹಿತ್ಯಾಭಿರುಚಿ, ವಿಮರ್ಶೆಯ ರೀತಿ ಇವುಗಳ ಬಗ್ಗೆ ಚರ್ಚೆ ಮಾಡಲಾಗಿದೆ. ಎರಡನೆಯ ಪುಸ್ತಕವಾದ ಇಂದಿನ ಕನ್ನಡ ಕಾವ್ಯದ ಗೊತ್ತುಗುರಿಗಳು, ಇದರಲ್ಲಿಯೂ ಅದೇ ವಿಷಯ ಮುಂದುವರೆಸಲಾಗಿದೆ. ಸಾಹಿತ್ಯಕ್ಕೆ ಸಂಸ್ಕೃತಿಯ ಮೂಲಾಧಾರ, ಕಾವ್ಯದಲ್ಲಿ ವ್ಯಕ್ತಿತ್ವದ ನಿರೂಪಣೆ, ಕಾವ್ಯದಲ್ಲಿಯ ಸ್ಫೂರ್ತಿ ಸಾಧನೆಗಳು, ಹಾಸ್ಯವಿಡಂಬನೆ ಇವುಗಳ ಸ್ಥಾನ. ಛಂದಸ್ಸಿನ ರೀತಿ ಪ್ರಭಾವ. ಇವುಗಳ ದರ್ಶನದಲ್ಲಿ ಬೇಂದ್ರೆಯವರ ಹಾಗು ಪುಟ್ಟಪ್ಪನವರ ಕಾವ್ಯ ವಿಮರ್ಶೆ ಇವು ಈ ಪುಸ್ತಕದಲ್ಲಿ ಬಂದಿವೆ ಒಂದೊಂದು ಮುಖದಿಂದ ವಿಚಾರ ಮಾಡಲು ಆಸ್ಪದವಾಗುವ ಹಾಗೆ ವಿವರಣೆಗಳು ಬಂದಿವೆ. ಕನ್ನಡ ಸಾಹಿತ್ಯದ ಆಗುಹೋಗುಗಳ ಬಗ್ಗೆ ವಿಚಾರ ಮಾಡುವವರಿಗೆ ಪ್ರಾರಂಭಿಕ ಪಾಠಗಳನ್ನು ಮಾರ್ಗದರ್ಶನವನ್ನು ಮಾಡುವ ಸಾಧನಗಳನ್ನು ತೋರಿಸಲಾಗಿದೆ.

"ಸಮುದ್ರದಾಚೆಯಿಂದ" ಇದು ಎರಡು ಭಾಗಗಳಲ್ಲಿ ಪ್ರಕಟವಾಗಿದೆ ೧೯೩೭-ಲ ಇದೊಂದು ಹೊಸ ಬಗೆಯ ಸಾಹಿತ್ಯ. ಇದಕ್ಕೆ ದಿನಚರಿಯೆಂದು ಕರೆದಿದ್ದಾರೆ. ದಿನಚರಿಯು ನಿತ್ಯ ಘಟಿಸುವ ಸಂಗತಿಗಳ ವರ್ಣನೆ— Diary. ಆದರೆ ಆ ಸಂಗತಿಗಳಿಂದ ಬರೆವವನ ಮೇಲೆ ಉಂಟಾಗುವ ಪ್ರತಿಕ್ರಿಯೆಗಳಿಗೆ ಹೆಚ್ಚು ಪ್ರಾಧಾನವುಂಟಾದಾಗ ದಿನಚರಿಯು gournalದ ಸ್ವರೂಪ— ಅಂದರೆ ಮನಚರಿಯಾಗುವುದು. ಇಲ್ಲಿ ಎರಡೂ ಕೂಡಿದ ಸಾಹಿತ್ಯ ಪ್ರಕಾರವಾಗಿದೆ. ಕನ್ನಡಕ್ಕೆ ತೀರ ಹೊಸದು ಈ ಪರಿ. ಉಳಿದ ಭಾಷೆ ಸಾಹಿತ್ಯಗಳಲ್ಲಿ, Diary, journal, memoirs, Reminiscenes, Reflections ಎಂಬ ಬಗೆಯ ವಿವಿಧ ಪ್ರಕಾರಗಳು ಕಂಡು ಬಂದು ಆ ವ್ಯಕ್ತಿಯ ಸುತ್ತಲೂ ನಡೆದ ಘಟನೆಗಳೂ ಆ ಘಟನೆಯಲ್ಲಿಯ ಆ ವ್ಯಕ್ತಿಯ ಪಾತ್ರವೂ ಪರಿಣಾಮವೂ ಐತಿಹಾಸಿಕ ಹಿನ್ನೆಲೆ— ಹಾಗೂ ಪ್ರತಿಕ್ರಿಯೆ ಇವುಗಳೂ ಬರುವುವಲ್ಲದೆ, ದಿನದಿನಕ್ಕೆ ಆ ವ್ಯಕ್ತಿಯಲ್ಲಿ ಆದ ವಿಕಾಸದ ಚಿತ್ರವೂ ಕಾಣುತ್ತದೆ. ವಿನಾಯಕರ ಈ ಕೃತಿಯು ಕನ್ನಡಕ್ಕೆ ಹೊಸ ಸಾಹಿತ್ಯ ಪ್ರಕಾರವನ್ನು ಒದಗಿಸಿದೆ.

'ಇಂದಿನ ಕರ್ನಾಟಕ' (೧೯೪೫)ವು ಒಂದು ಬಗೆಯಿಂದ ಇತಿಹಾಸವಾದರೆ ಇನ್ನೊಂದು ದೃಷ್ಟಿಯಿಂದ ಸ್ಥಳ ಪುರಾಣದ ಕತೆಯಾಗಿದೆ. ಕರ್ನಾ

ಟಕದ ಪಂಚಪ್ರಾಣಗಳಾದ ಉತ್ತರ ಕರ್ನಾಟಕ, ಮದ್ರಾಸ ಕರ್ನಾಟಕ, ಮೈಸೂರ ಕರ್ನಾಟಕ, ನಿಜಾಮ ಕರ್ನಾಟಕ, ಕೊಡಗು ಈ ಪ್ರದೇಶವಲ್ಲಿಯ ಹಲವಾರು ಊರುಗಳ ಬಗ್ಗೆ ಮಾಹಿತಿ, ಅವುಗಳ ಸಂಸ್ಕೃತಿ ಅವು ಕನ್ನಡ ನಾಡಿನ ಇತಿಹಾಸದಲ್ಲಿ ವಹಿಸಿದ ಪಾತ್ರ ಇವುಗಳನ್ನು ಕೊಡಲಾಗಿದೆ. ಹೀಗೆ ಸ್ಥಳಗಳ ಅಭ್ಯಾಸವನ್ನು ಹಿಂದಿನ ಆಳರಸರು 'ಗಜೆಟಿಯರ'ವಲ್ಲಿ ಕೂಡಿ ಹಾಕಿದ್ದಾರೆ. ಅವರಿಗೆ ಜನರ ಪರಿಸ್ಥಿತಿ— ಇತಿಹಾಸ ತಿಳಿಯಬೇಕೆಂಬ ಲವಲವಿಕೆ. ಅದು ಸಾಮ್ರಾಜದ ಅಡಿಗಲ್ಲು ಭದ್ರಮಾಡಬೇಕೆಂಬ ಸಂಕುಚಿತ ದೃಷ್ಟಿಯಿಂದಲೇಕೆ ಮಾಡಿರಲಿ, ಅದು ಇಂದಿಗೂ ಬಹು ಉಪಯುಕ್ತ ಮಾಹಿತಿಯಾಗಿದೆ. ರಾಷ್ಟ್ರೀಯ ದೃಷ್ಟಿಯಿಂದ ಬರೆದರೆ ಇನ್ನು ಹೆಚ್ಚು ಪ್ರಯೋಜನವಾಗುವುದು. ವಿನಾಯಕರ 'ಇಂದಿನ ಕರ್ನಾಟಕ'ದ ಮಾದರಿಯಲ್ಲಿ ಹೆಚ್ಚಿನ ಸಾಹಿತ್ಯ ಹೊರ ಬರಬೇಕು. ಇಂದಿನ ಸರಕಾರಗಳು ಗೆಜೆಟಿಯರುಗಳ ಪುನರ್ಮುದ್ರಣ— ಪರಿಶೋಧಿತ ಆವೃತ್ತಿಗಳನ್ನು ಹೊರಡಿಸಲುದ್ಯುಕ್ತವಾಗಿವೆ. ಈ ಕಾರ್ಯದಲ್ಲಿ ಸಾಹಿತ್ಯಕರ— ಸಂಶೋಧಕರ— ಸಾಮಾಜಿಕ ವಿಚಾರಿಗರ ಸಹಾಯ ಪಡೆದರೆ ಆ ಪುಸ್ತಕಗಳು ಪೂರ್ಣವೂ ಹೆಚ್ಚು ಉಪಯುಕ್ತವೂ ಆಗುವುವು.

" ಚೆಲುವಿನ ನಿಲುವು " ಇದು ೧೯೪೯ರಲ್ಲಿ ಪ್ರಕಟವಾದುದು. ಇಲ್ಲಿಯ ವಿಷಯ ಸೌಂದರ್ಯ ಶಾಸ್ತ್ರಕ್ಕೆ ಸಂಬಂಧಪಟ್ಟುದು. 'ಚೆಲವು ಅನಂತವಾಗಿದೆ. ಅದನ್ನು ಕಣ್ಣಿಟ್ಟು ನೋಡುವ ನೋಟಗಳಿಗೂ ಲೆಕ್ಕವಿಲ್ಲ. ಇಂಥ ಒಂದು ದೃಷ್ಟಿಗೆ ಬಿದ್ದ ಚೆಲುವನ್ನು ಕೆಲವು ಮಟ್ಟಿಗೆ ವಿಂಗಡಿಸಿ ವರ್ಣಿಸಿ ತೋರಿಸುವ ಪ್ರಯತ್ನ ಇಲ್ಲಿ ಮಾಡಿದೆ. ಪ್ರಜ್ಞೆಯೆ ಮೂಲಧನ. ಈ ಪ್ರಜ್ಞೆಯನ್ನು ಕುದುರಿಸುವ ಮೂಲ ವಸ್ತುವೆ ಸೃಷ್ಟಿ.' ಸೃಷ್ಟಿಯಲ್ಲಿಯ ಸೌಂದರ್ಯದ ಅನುಭವ ಪಡೆಯುವವನು ಕಲೋಪಾಸಕನು. 'ದಿವ್ಯ ಸೌಂದರ್ಯವೆ ಸತ್ಯ. ಆಯಾ ಜೀವಿಗೆ ತಕ್ಕಂತೆ ಈ ದೈವಿಕ ದೃಷ್ಟಿಯನ್ನು ದೈವಿಕ ಸಂಕಲ್ಪದ ಮೇರೆಗೆ ಕರುಣಿಸುವ ರತ್ನ ರಸಿಕನೇ ದೈವ.'

ಈ ಪುಸ್ತಕದಲ್ಲಿ ೧೩ ಲೇಖನಗಳಿವೆ. ಜೀವನದಲ್ಲಿಯ ಆನಂದ, ಅಂತರಂಗದ ಕವ, ಸೃಷ್ಟಿ ದೃಷ್ಟಿಗಳ ಸಮ್ಮಿಲನ, ದೃಷ್ಟಿದೋಷ, ಚೆಲುವಿನ ನಾಲ್ಕು ನೋಟಗಳು, ಸಾಹಿತ್ಯದಲ್ಲಿ ಸೌಂದರ್ಯ, ಚೆಲುವಿನ ಪರಂಪರೆ,

ಪ್ರಕೃತಿಯ ರೂಪರಾಶಿ, ಸ್ತ್ರೀ ರೂಪ. ಪ್ರೀತಿ-ಶಾಂತಿ, ಸೌಂದರ್ಯವೇ ಸತ್ಯ, ದೈವ; ಇವು ಪುಸ್ತಕದಲ್ಲಿಯ ವಿಚಾರ ವ್ಯಾಪ್ತಿಯನ್ನು ಸೂಚಿಸುವುವು. ಈ ವಿಚಾರ ಧಾರೆಯನ್ನು ಮಂಡಿಸುವಾಗ— ಸಮರ್ಥಿಸುವಾಗ ಅಲ್ಲಲ್ಲಿ ಉದಾಹರಣೆಗಳನ್ನು ಕೊಡಲಾಗಿದೆ. ಅವು ವಿನಾಯಕ ಜೀವನದಲ್ಲಿಯ ಘಟನೆಗಳೇ ಆದ್ದರಿಂದ ಚೆಲುವಿನ ಬಗ್ಗೆ ವಿನಾಯಕರ ನಿಲುವು ಏನಿದೆಯೆಂಬುದು ಈ ಪುಸ್ತಕದಿಂದ ಸ್ಪಷ್ಟವಾಗುವುದು. ಸೃಷ್ಟಿಯಲ್ಲಿಯ– ಅದು ನಿರ್ಸರ್ಗವಿರಲಿ– ಸಾಹಿತ್ಯಕವಿರಲಿ,– ಸೌಂದರ್ಯವನ್ನು ತಿಳಿಯಲು, ಅನುಭವಿಸಲು, ಅದರಿಂದ ಸ್ಫೂರ್ತಿ ಪಡೆದು ಮೈಗೂಡಿಸಿಕೊಳ್ಳಲು ದೈವಿಕ ಕರುಣೆ ಬೇಕು. ಅದು ವ್ಯಕ್ತಿಗೂ ಬೇಕು; ಜನತೆಗೂ ಬೇಕು.

ಹುಟ್ಟಿದ ತಪ್ಪಿಗೆ ಬದುಕಿ, ಬದುಕಲಾರದೆ ಇಲ್ಲವೆ ಹೇಗೊ ಬದುಕಿ ಸಾಯುವುದು ಪಶುಜೀವನ. ಬದುಕು ಸುಖಮಯವಾಗಬೇಕು. ಬದುಕು ಆನಂದಮಯವಾಗಬೇಕು, ಬದುಕು ಸಾರ್ಥಕವಾಗಬೇಕು. ಎಂದು ಬಯಸುವ ವ್ಯಕ್ತಿ, ಸಮಾಜ, ರಾಷ್ಟ್ರ ಇವು ಸೌಂದರ್ಯೋಪಾಸನೆ ಕೈಕೊಳ್ಳುವುದು ಅಗತ್ಯವಾಗಿದೆ ಸುಸಂಸ್ಕೃತನೆಂದರೆ ಯಾವುದು ಒಳ್ಳೆಯದು, ಯಾವುದು ಸುಂದರವು, ಯಾವುದು ಸತ್ಯವು, ಇದನ್ನು ತಿಳಿವ ಲವಲವಿಕೆ, ಇವುಗಳನ್ನು ಕಾರ್ಯರೂಪದಲ್ಲಿ ತರುವ ಸಾಧಕವೃತ್ತಿ ಇದ್ದವನು. ಸುಶಿಕ್ಷಿತನೆಂದರೆ, ಒಳಿತು ಕೇಡುಗಳನ್ನು ತಿಳಿದು ತಿಳಿಸಿ ಹೇಳುವ ಶಕ್ತಿ ಇದ್ದವನು. ಆದರೆ ಈಗ ನಮ್ಮಲ್ಲಿ ಹೆಸರಿಗೆ ಸುಶಿಕ್ಷಿತರು, ಹೆಸರಿಗೆ ಸುಸಂಸ್ಕೃತರು, ವೇಷಭೂಷಣ– ವಿದ್ಯಾ– ವಾತಾವರಣದವೇಲೆ ಈ ಹೆಸರುಗಳನ್ನು ಪಡೆದವರು. ಇದು ಹೋಗಿ ನಿಜವಾದ ಸುಸಂಸ್ಕೃತರಾದರೆ, ನಿಜವಾದ ಸುಶಿಕ್ಷಿತರಾದರೆ, ಮಾನವ ನಿರ್ಮಿತವಾದ ಕುರೂಪ, ವಿಷಮತೆ, ಅಸತ್ಯ ಅಶುಭಗಳು ಮಾಯವಾಗಿ ನಿಸರ್ಗವಲ್ಲಿಯ ಚೆಲವು, ಸತ್ಯ, ಶುಭಗಳು ಎಲ್ಲೆಡೆಗೂ ನೆಲೆಗೊಳ್ಳುವುವು. ಈ ಬಗೆಯಾದ ದೃಷ್ಟಿಯನ್ನು ಒದವಿಸುವುದು ಈ ಚೆಲುವಿನ ನಿಲುವು. ಇದು ಜೀವನ ಪಾಠವಾಗಿದೆ.

" ಜೀವನ ಪಾಠಗಳು " ಎಂಬದು ವಿನಾಯಕರ ಇನ್ನೊಂದು ಪ್ರಬಂಧ ಸಂಕಲನ. ೧೯೪೪ರಲ್ಲಿ ಪ್ರಕಟವಾದುದು. ಇದರಲ್ಲಿಯ ಲೇಖನಗಳು ವನಮಾಲಿಗೆ ಬರೆದ ಓಲೆಗಳು. ಅವು ಇಂದು ಜೀವನ ಪಾಠಗಳಾಗಿ ಪುಸ್ತಕ ರೂಪ

ದಲ್ಲಿ ಬಂದಿವೆ. "ಪ್ರಪಂಚದಲ್ಲಿ ಸುಖವಿಲ್ಲದೆ ಜಗತ್ತೆಲ್ಲ ಶೂನ್ಯವೆಂದು ಪ್ರತಿಪಾದಿಸುವವರು ಇದ್ದಾರೆ." ಇದು ನಿಜ. ಮಾನವನು ಬಯಸುವುದು ಸುಖ. ಈ ಸುಖವೆಂದರೇನೆಂಬುವುದು ಒಮ್ಮೊಮ್ಮೆ ಮಾನವನಿಗೆ ತಿಳಿಯದೇ ಹೋಗಬಹುದು. ದೈಹಿಕ ಸುಖವೊ, ಮಾನಸಿಕ ಸುಖವೊ, ಐಹಿಕ ಸುಖವೊ, ಪಾರಮಾರ್ಥಿಕ ಸುಖವೊ, ಇವುಗಳ ಸಮ್ಮಿಶ್ರ ಸುಖವೊ, ಅಂತೂ ಸುಖಬಡಬೇಕೆಂದು ಒಳಗಿನ ದನಿ ಹೇಳುತ್ತಿರುತ್ತದೆ. ಸುಖವನ್ನು ಹುಡುಕುವ ಹವ್ಯಾಸದಲ್ಲಿ ಮಾನವನು ಇರುತ್ತಾನೆ.

ದುಃಖದಾಯಕ ಸಂಗತಿಗಳನ್ನು ಕಡಿಮೆ ಮಾಡಿಕೊಳ್ಳುವುದೇ ಸುಖವೆಂದು ಅನುಭವಕ್ಕೆ ಬರುವುದುಂಟು. ಪ್ರತ್ಯಕ್ಷ, ನಿಶ್ಚಿತ, ಸಕ್ರಿಯ ಸುಖದ ಕಲ್ಪನೆ ಕಾಲ ಕಾಲಕ್ಕೆ ವಾತಾವರಣಕ್ಕೆ ತಕ್ಕಂತೆ ಬದಲಾಗಿ ಅದು ಗುರಿಯಾಗಿ ಉಳಿವುದೇ ಹೊರತು ಸಾಧ್ಯವಾಗುವ ವಿಷಯವಲ್ಲ ಎಂದು ಎನ್ನಿಸುವುದು. ಆದ್ದರಿಂದ ಅಸುಖ- ಕೊಡುವ, ತರುವ ಸಂಗತಿ ಸಮಾಚಾರ-ಸನ್ನಿವೇಶಗಳನ್ನು ಸಮಾಧಾನದಿಂದ ದೂರವಿರಿಸಿದರೆ ಸುಖದ ಪ್ರಾಪ್ತಿಯಾಯಿತೆಂದು ತಿಳಿಯಬೇಕು. ಜೀವನವೆಂದರೆ ಸಹಜೀವನ. ಜತೆಗೆ ಯಾರಾದರೂ ಇರುವವರೆ! ಎರಡು ಇಲ್ಲವೆ ಹೆಚ್ಚು ಜೀವಗಳು ಒಂದೆಡೆ ಸೇರಿದರೆ, ಭಿನ್ನ ವಾತಾವರಣ ಉಂಟಾಗುವುದು ಸಹಜ. "ಒಂದರೊಲು ಒಂದಿಲ್ಲ; ಇಂದಿಗೂ ಎರಡು ಹೊಂದಿಲ್ಲ. ಆದರೂ ನಡೆದಿದೆ ಸೃಷ್ಟಿ." ಹೇಗೆ ಹೊಂದಿಕೆಯಿಲ್ಲದೆ ಮುಂದೆ ಸಾಗಿದ ಸೃಷ್ಟಿಯಲ್ಲಿ ಹೊಂದಿಕೆ-ಸಾಮರಸ್ಯ-ಸಮಾಧಾನ ತಂದುಕೊಳ್ಳುವುದೇ ಸುಖ. ಅದನ್ನು ತಂದುಕೊಳ್ಳಬೇಕಾದರೆ ತನ್ನಲ್ಲಿಯ ಕೊರತೆ, ವೈಗುಣ್ಯ, ವಿಕಾರ-ವಿಚಾರಗಳನ್ನು ತಿಳಿದುಕೊಂಡು ಇತರರಲ್ಲಿ ಕಂಡು ಬರುವವನ್ನು ಅಳೆದು ತಿಳಿದು ನೋಡಿ, ಅವು ಅಲ್ಲಿ ಇರಲೇಬೇಕಾದ ಸಂಗತಿಗಳೆಂದು ಮನವರಿಕೆ ಮಾಡಿಕೊಂಡರೆ, ತನ್ನ ವ್ಯಕ್ತಿತ್ವರೂಪದಲ್ಲಿ ಅಗತ್ಯವಾದವುಗಳು ಇವು ವ್ಯಕ್ತಿ ವಿಕಾಸಕ್ಕೆ—ಪೂರಕವಾದುವು ಎಂಬ ತಿಳಿವಳಿಕೆ ಮೂಡಿದಾಗ ಅಸಡ್ಡೆ, ಅಸಹನೆ—ಅಸೂಯೆ, ಅಸಮಾಧಾನಗಳು ಕಡಿಮೆಯಾಗಿ, ವಿರಸವೂ ಸರಸವಾಗುವುದು. ವಿಕೃತಿಯೂ ಆಕೃತಿಯಾಗುವುದು. ಜೀವನವು ಸಮರಸವಾಗುವುದು. ಅದು ಸುಖ ಕೊಡುವುದು. ಸಾಮಾನ್ಯರಿಗೆ ಈ ಬಗೆಯ ಸಾಮರಸ್ಯದ ತಿಳಿವು ತಂದುಕೊಡುವ ಜೀವನ ಪಾಠಗಳು ಇಲ್ಲಿವೆ.

ಸಹಜವಾದ ಹೃದ್ಯವಾಗುವ ಶೈಲಿಯಲ್ಲಿ ಕಿವಿಮಾತು ಹೇಳಿದ ಹಾಗೆ ಶೈಲಿಯಿರುವುದರಿಂದ ಶಾಸ್ತ್ರೀಯ ವಿವೇಚನೆಯ ಜಟಿಲತೆ ಇಲ್ಲ; ಗಾಂಭೀರ್ಯ ವಿಲ್ಲ. ಮನೆಮಾತಿನಲ್ಲಿ ಮನ ಮುಟ್ಟುವ ಮಾತುಗಳು. ನಿತ್ಯ ಜೀವನದಲ್ಲಿ ಬರುವ ಸಮಸ್ಯೆಗಳು, ಪ್ರಶ್ನೆಗಳು ಇವುಗಳ ಬಗ್ಗೆ ಇಲ್ಲಿ ವಿವೇಚನೆ ಇದೆ. ದೇವ-ಜೀವ, ಮಾನವನ ಕರ್ತವ್ಯಗಳು, ಭಕ್ತಿ, ಮೂರ್ತಿ ಪೂಜೆ, ಪ್ರೇಮ-ಜ್ಞಾನ, ಕರ್ಮ ಕುಶಲತೆ, ದಾಂಪತ್ಯ, ರೋಗಿಷ್ಟ ಸಮಾಜದಲ್ಲಿ ದೇಹಾರೋಗ್ಯ, ಮನಸ್ಸು, ಮನೆ, ಉದರ ನಿರ್ವಾಹ, ಸಮಾಜ ಸೇವೆ, ಸಾತ್ವಿಕ ವ್ಯಕ್ತಿ, ಸುಖದುಃಖಗಳ ದ್ವಂದ್ವ, ಸಮಾಜದಲ್ಲಿ ಜೀವಿಯ ಬಾಳು, ಜೀವನದ ಗೋಲು, ಹೀಗೆ ೨೮ ಪಾಠಗಳು ಇಲ್ಲಿವೆ. ಅವುಗಳ ವಿಷಯ ವ್ಯಾಪ್ತಿಯನ್ನು ನೋಡಿದರೆ ಸಾಮಾನ್ಯನ ಜೀವನದಲ್ಲಿ ಬರುವ ಪ್ರಶ್ನೆಗಳು, ಅಡ್ಡಿ-ಆತಂಕಗಳು, ವಿಷಮ ಪ್ರಸಂಗಗಳು ಇವುಗಳ ಮನವರಿಕೆಯಾಗುವುದು. ಇಷ್ಟು ಸಮಸ್ಯೆಗಳಿಗೆ ಒಂದು ಬಗೆಯ ಸಮಾಧಾನದ ಪರಿಹಾರಗಳು ದೊರೆತರೆ ಯಾವ ಜೀವವು ಸುಖದ ದಾರಿಗೆ ಬರುವುದು; ಸಾಗುವುದು.

---

# ೮

## ಇಂಗ್ಲಿಶ ಬರೆಹ

The Song of life ( 1947 ).

The Poetic approach to language. ( 1952 ).

ಇಂಗ್ಲಿಶ ಭಾಷೆಯ ಅಭ್ಯಾಸಿಗಳೂ ಪ್ರಾಧ್ಯಾಪಕರೂ ಆಗಿರುವ ವಿನಾಯಕರು ಇಂಗ್ಲಿಶದಲ್ಲಿ ಹೆಚ್ಚಾಗಿ ಬರೆದಿಲ್ಲವೆಂಬಂತೆ ತೋರುತ್ತದೆ. ಅದಕ್ಕೆ ಕಾರಣವು ಕನ್ನಡದ ಮೇಲಿನ ಅವರ ಭಕ್ತಿ–ಕನ್ನಡತನದ ಅರಿವು ಇವೇ ಎಂದು ಸ್ಪಷ್ಟವಾಗುತ್ತದೆ. ನಮ್ಮ ನಾಡು–ನುಡಿ–ನಾಡವರು ಬೆಳೆಯಬೇಕಾದರೆ ನಾಡಿನ ನುಡಿಯನ್ನೇ ಪ್ರಕಟನೆಯ ಮಾಧ್ಯಮವನ್ನಾಗಿ ಮಾಡಿಕೊಳ್ಳಬೇಕಾಗಿದ್ದುದು ಅಗತ್ಯವಾಗಿತ್ತು ಇಂಗ್ಲಿಶ ರಚನೆಯ ಒಲವಿನಿಂದ ಕನ್ನಡಕ್ಕೆ ತಿರುಗಿಸಿದವರು ಶ್ರೀ. ಬೇಂದ್ರೆಯವರು ಎಂದು ವಿನಾಯಕರೇ ಹೇಳಿದ್ದಾರೆ. ಈ ಕಾರಣಗಳಿಂದ ಕಾವ್ಯರಚನೆ-ಪ್ರಕಟನೆಯ ಮಾಧ್ಯಮ ಪ್ರಾರಂಭದಲ್ಲಿ ಇಂಗ್ಲಿಶ ಆಗಿದ್ದರೂ ಕನ್ನಡವೇ ಮೇಲುಮೊಗ ಮಾಡಿಕೊಂಡು ಬಂದಿತು. ಅದನ್ನು ಇದುವರೆಗೆ ವಿವೇಚಿಸಿದ ಗ್ರಂಥಗಳಿಂದ ಸ್ಪಷ್ಟವಾಗುವುದು. ಒಂದು ವೇಳೆ ಕೇವಲ ಇಂಗ್ಲಿಶದಲ್ಲಿಯೆ ಬರೆಯುತ್ತ ಹೋಗಿದ್ದರೆ ಕನ್ನಡಕ್ಕೆ ಎಷ್ಟು ಕೊರತೆಯಾಗುತ್ತಿತ್ತು ಎಂಬುದನ್ನು ಇಂದಿನ ಅವರ ಕನ್ನಡ ಸಾಹಿತ್ಯದ ಬೆಳಸಿನಿಂದ, ವ್ಯಾಪ್ತಿಯಿಂದ, ಗುಣದಿಂದ ಕಂಡುಬರುವುದು.

ಆದರೆ ಇಂಗ್ಲಿಶದಲ್ಲಿ ಬರೆಯುವುದನ್ನು ಬಿಟ್ಟುಕೊಟ್ಟರು ಎಂದು ಅರ್ಥವಲ್ಲ. ಅನಿವಾರ್ಯವಾಗಿದ್ದರೆ ಮಾತ್ರ ಇಂಗ್ಲಿಶದಲ್ಲಿ ಬರೆಯುವುದು. ಅಗತ್ಯವಾದ ಬರವಣಿಗೆಯೆಲ್ಲ ಕನ್ನಡದಲ್ಲಿ. ಕಾಲಕಾಲಕ್ಕೆ ಲೇಖನಗಳನ್ನು ಇಂಗ್ಲಿಶದಲ್ಲಿ ಬರೆದಿದ್ದಾರೆ. ಇಂಗ್ಲಿಶ ಪತ್ರಿಕೆಗಳಲ್ಲಿ, ಸಂಕಲನ ಗ್ರಂಥಗಳಲ್ಲಿ, ಸಂಪಾದಿತ ಗ್ರಂಥಗಳಲ್ಲಿ, ಪರಪ್ರಾಂತದವರ ಪರಿಚಯಕ್ಕಾಗಿ ಬರೆದ ಲೇಖನಗಳು ಹಲವಾರು ಇವೆ. Bendre and his poetry ಯಿಂದ ಪ್ರಾರಂಭವಾಗಿ ಮೊನ್ನೆ ಮೊನ್ನೆ ಪ್ರಕಟವಾದ ಭಾರತ ಸರಕಾರದ ಪ್ರಕಟನೆಯ ಶಾಖೆಯು ಪ್ರಕಟಿ

ಸಿದ ಪುಸ್ತಕಗಳ ವರೆಗೆ ಅನೇಕ ಲೇಖನಗಳನ್ನು ಬರೆದಿದ್ದಾರೆ. ವಿವಿಧ ವಿಷಯಗಳ ಮೇಲೆ ಬರೆದಿದ್ದಾರೆ. ಅವೆಲ್ಲವುಗಳ ಸಂಕಲನವಾದರೆ ಅದೊಂದು ಹೆಬ್ಬೊತ್ತಿಗೆಯೇ ಆಗುವುದು.

ಈಗ ಪುಸ್ತಕ ರೂಪದಲ್ಲಿ ಉಪಲಬ್ಧವಿದ್ದುವು ಎರಡು. ಒಂದು The Song of life ಎಂಬ ಇಂಗ್ಲಿಶ ಕವನಗಳ ಸಂಕಲನ. ಇನ್ನೊಂದು The Poetic approach to language, ಎಂಬ ಭಾಷಾಶಾಸ್ತ್ರದ ಗ್ರಂಥ. ಕವನ ಸಂಗ್ರಹದಲ್ಲಿ ೩೧ ಕವನಗಳಿವೆ. ಕೆಲವು ಮೂಲದಲ್ಲಿಯೆ ಇಂಗ್ಲಿಶದಲ್ಲಿ ಬರೆದವು. ಹೆಚ್ಚಾಗಿ ಮೂಲ ಕನ್ನಡ ಕವನದ ಇಂಗ್ಲಿಶ ಭಾಷಾಂತರಗಳು. ಮೂಲದಲ್ಲಿ ಕನ್ನಡ ಕವನವೊಂದಿದೆ ಎಂದು ಹೇಳಿದರೆ ಮಾತ್ರ ಅವು ಭಾಷಾಂತರಗಳು ಎನ್ನಿಸುವ ಹಾಗೆ ಇವೆ. ಇಲ್ಲವಾದರೆ ಅವುಗಳನ್ನು ಅವುಗಳಷ್ಟಕ್ಕೆ ನೋಡಿವರೆ ಅವು ಇಂಗ್ಲಿಶದಲ್ಲಿಯೇ ಮೂಲತಃ ಬರೆದಂತಹ ಕವನಗಳ ಗುಣವುಳ್ಳವು. ಭಾಷಾಂತರವೆಂದು ಅವುಗಳ ಬೆಲೆ ಕಡಿಮೆಯಾಗಿಲ್ಲ. ಮೇಲಾಗಿ ಮೂಲ ಲೇಖಕರೇ-ಕವಿಗಳೇ-ಇಂಗ್ಲಿಶ-ಕನ್ನಡದಲ್ಲಿ ಪ್ರಭುತ್ವವುಳ್ಳ ಕವಿಗಳೇ ಭಾಷಾಂತರಿಸಿದ್ದರಿಂದ ರೂಪ ಬದಲಾಗಿದೆಯೇ ಹೊರತು ತಿರುಳಿಗೆ ವ್ಯತ್ಯಯ ಬಂದಿಲ್ಲ ಇವರಿಂದ ಕನ್ನಡದಲ್ಲಿ ಎಂತಹ ಸತ್ವಯುತವಾದ ಕವನಗಳನ್ನು ಬರೆದ ಕವಿಗಳಿದ್ದಾರೆಂದು ಕನ್ನಡೇತರರಿಗೆ ತಿಳಿವುದು.

ಇದರಲ್ಲಿ ೧೩ ಕವನಗಳು ಸ್ವತಂತ್ರ ಮೂಲ ಇಂಗ್ಲಿಷಿನಲ್ಲಿಯೆ ಬರೆದವುಗಳು. ಕೆಲವು ಪ್ರಾಸ-ಛಂದೋಬದ್ಧವಾದುವು. ಕೆಲವು ಮುಕ್ತಛಂದವಾದವು. ಪ್ರಕಟವಾದ ನಂತರ ಇಂಗ್ಲಿಶ ಪತ್ರಿಕೆಗಳಲ್ಲಿ ಒಳ್ಳೇ ವಿಮರ್ಶೆಗಳು ಬಂದಿವೆ. 'ಹಿತವಾದ' ಪತ್ರಿಕೆಯಲ್ಲಿ ಬಂದ ವಿಮರ್ಶೆಯು ಹೀಗಿದೆ :

" ಇಂದಿನ ಯುಗವು—ಹಿಂದೆಂದೂ ತೋರದ ರೀತಿಯಲ್ಲಿ— ಭೌತಿಕ ಐಹಿಕ ಧ್ಯೇಯಗಳ ಬಗ್ಗೆ ಲಕ್ಷ್ಯವೀಯುತ್ತಿದೆ. ಆಧ್ಯಾತ್ಮಿಕದ ಕಡೆಗೆ ಲಕ್ಷ್ಯ ಕಡಿಮೆಯಾಗಿದೆ. ಆಚಾರ್ಯರು ಪತ್ತು ಕಳೆದುಕೊಂಡವರಾಗಿದ್ದು ಪ್ರವಾದಿಗಳೆಂಬುವರು ಮೂಕರಾಗಿದ್ದಾರೆ. ಮಾನವ ಕುಲವು ಹೆಚ್ಚು ಹೆಚ್ಚಾಗಿ ವಿಜ್ಞಾನಿಗಳತ್ತ ಮುಖಮಾಡುತ್ತಿದೆ. ವಿಜ್ಞಾನಿಗಳೇ ಇಂದಿನ ಯುಗದ ಪ್ರಭಾವಿ ಪುರುಷರಾಗಿದ್ದಾರೆ. ಹೀಗಿದ್ದರೂ ಕಾವ್ಯಕ್ಕಾಗಿ ಜನರು ಕೊರೆಯು

ತ್ತಿದ್ದಾರೆ. ಕಾವ್ಯವು ಐಷಾರಾಮದ ವಿಷಯವಲ್ಲ. ಅದಿಲ್ಲದಿದ್ದರೆ ಜೀವನವು ಒಕ್ಕಣ್ಣಿನ ನೋಟವಾಗುವುದು ಎಂಬ ಹಾಗಿದೆ. ಕಾವ್ಯವು ಆವಶ್ಯಕವಾಗಿದ್ದಾಗ ನಿಜವಾದ ಕವಿಯ ಅಗತ್ಯವೆನ್ನಿಸುವುದು. ಇಂತಹ ಕವಿಯಾದ ವಿನಾಯಕ ಕೃ. ಗೋಕಾಕರು ಮೊದಲು ಕನ್ನಡದಲ್ಲಿ ಬರೆಯುತ್ತಿದ್ದರು. ಈಗ ಇಂಗ್ಲಿಶನ್ನು ಪ್ರಕಟನೆಯ ಮಾಧ್ಯಮವನ್ನು ಮಾಡಿಕೊಂಡಿದ್ದಾರೆ ಈ ಪುಸ್ತಕವು ಭಾರತೀಯರಾದ ಇಂಗ್ಲಿಶ ಪದ್ಯ ರಚನೆಕಾರರಲ್ಲಿ ವಿನಾಯಕರಿಗೆ ಗೌರವದ ಸ್ಥಾನವನ್ನು ದೊರಕಿಸಿಕೊಡುವವು. ಇಂಗ್ಲಿಶ ಭಾಷೆಯ ಮೇಲೆ ಈ ಕವಿಗಳಿಗೆ ಪ್ರಭುತ್ವವಿದೆಯೆಂದು ಈ ಕವನ ಸಂಗ್ರಹವು ಸಾರುತ್ತಿದೆ. ಇದರಲ್ಲಿಯ ಪ್ರತಿಯೊಂದು ಕವನವೂ ನಿಜವಾದ ಕಾವ್ಯವು. ಯೌವನ, ಸೌಂದರ್ಯ, ಸತ್ಯ, ಇವು ಈ ಕವನಗಳ ವಸ್ತುವಾಗಿವೆ. ಭಾರತೀಯವಾದ ಅನುಭಾವೀ ಗುಣವು ಇವುಗಳಲ್ಲಿದೆ ಈ ಕವಿಗೆ ಇಂಗ್ಲಿಶ್ ಭಾಷೆಯು ಪರಕೀಯವಾಗಿದೆಯೆಂದು ಸಹ ಅನ್ನಿಸುವುದಿಲ್ಲ."

The Poetic approach to language, ಇದು ೧೯೫೨ ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟದವಾದರೂ ಇದರಲ್ಲಿ ಬಂದ ವಿಷಯವು ೧೯೪೪ ರಲ್ಲಿ ಮುಂಬಯಿ ವಿಶ್ವವಿದ್ಯಾಲಯದವರು ಏರ್ಪಡಿಸಿದ ವಿಲ್ಸನ್ ಭಾಷಾಶಾಸ್ತ್ರದ ಭಾಷಣ ಮಾಲೆಯಲ್ಲಿ ಕೊಟ್ಟ ಭಾಷಣಗಳ ಸಾರವು. ಆರು ಭಾಷಣಗಳಿವೆ. ಇದರಲ್ಲಿ ಬಂದ ವಿಷಯವು ಮೊದಲಿನ ಮೂರು ಭಾಷಣಗಳ ವಿವರಣೆಯು. ಇದರ ಪ್ರತಿರೂಪವಾಗಿ ಇನ್ನೊಂದ ಗ್ರಂಥ ಬರಲಿದೆ. "ಕಾವ್ಯ ಮುಖದ ಭಾಷೆ" ಎಂದು ಇದರ ವಿಷಯವಾಗಿದ್ದರೆ, ಇನ್ನೊಂದು ಭಾಷಾ ಮುಖದ ಕಾವ್ಯ ಎಂಬುದು. ಈ ಎರಡೂ ಮುಖಗಳಿಂದಲೂ ಇಂಗ್ಲಿಶ ಭಾಷೆಯ ಇತಿಹಾಸವನ್ನು ಪರೀಕ್ಷಿಸಲಾಗಿದೆ. ಆದರಿಂದ ಇಂಗ್ಲಿಶ ಭಾಷೆಯ ಸಮಗ್ರ ಚಿತ್ರವು ಕಾವ್ಯಗಳ ಮಾಧ್ಯಮದಿಂದ ತಿಳಿದು ಬರುವುದು.

ಕಾವ್ಯ ಮುಖದಿಂದ ಭಾಷಾ; ಭಾಷಾಬ್ಯಾಸ ಮತ್ತು ಭಾಷೆಯು ಕಾವ್ಯವಾಗಿರುವ ವಿಷಯವು ಇಲ್ಲಿ ಪ್ರತಿಪಾದಿತವಾಗಿದೆ. ಭಾಷೆಯ ಬೆಳಗೆ ಹಾಗು ವಿಕಾಸಕ್ಕೆ ಕಾವ್ಯದಿಂದ ಯಾವ ನೆರವು ದೊರೆತಿದೆ ಎಂಬುದನ್ನು ವಿವರವಾಗಿ ನೋಡಲಾಗಿದೆ. ಕಾವ್ಯವು ಹೊಸ ಹೊಸ ರೀತಿಯಲ್ಲಿ, ಹೊಸ ಹೊಸ ಪದರು ಅರ್ಥಗಳಲ್ಲಿ ಶಬ್ದಗಳನ್ನು ಹೊಸ ಹೊಸ ಅನುಭವಗಳ ನಿರೂ

ಪಣೆಯಲ್ಲಿ ಬಳಸುವುದರಿಂದ ಭಾಷೆಯು ಹೆಚ್ಚು ಅರ್ಥಗರ್ಭಿತವಾಗುತ್ತ ಹೋಗುವುದು. ಕಾವ್ಯದಲ್ಲಿ ಧ್ವನಿ ಮುಖ್ಯ. ಧ್ವನಿಯು ಶಬ್ದಗಳ ಸೊತ್ತು. ಇದರಿಂದ ನಾದವೂ, ಅರ್ಥವೂ ಗರ್ಭಿತಾರ್ಥವೂ, ವ್ಯಂಗ್ಯವೂ ಹೊರಡುವುವು ನಾದವೊಂದೆ ಇರುವಾಗ ಭಾಷೆಯು ಸಂಗೀತಮಯವಾಗಿರುವುದು. ಆಗ ಭಾವನೆಯು ಪ್ರಧಾನವಾಗಿರುವುದು. ಅರ್ಥಗರ್ಭಿತವೂ ಗರ್ಭಿತಾರ್ಥವುಳ್ಳದ್ದೂ ಆದಾಗ ಭಾಷೆಯು ಅಂತರಂಗದ ಸತ್ವದ ವಾಹನವಾಗುವುದು ಸಂನ್ನಿವೇಶಗಳ ವಿವರಣೆ, ಆಲಂಕಾರಗಳ ನಿರೂಪಣೆಗಳು ಬಂದಾಗ ಭಾಷೆಯು ಕಲ್ಪಕತೆಯ ಪ್ರಕಟಿತ ಸ್ವರೂಪವಾಗುವುದು. ಭಾವನೆಯಾಗಲಿ, ವಿಚಾರವಾಗಲಿ, ಅಲಂಕಾರವಾಗಲೀ ಕಲ್ಪಕತೆಯಾಗಲೀ ಭಾಷೆಯಿಲ್ಲದೆ ಅಸ್ತಿತ್ವವಿಲ್ಲ ಅವು ಭಾಷೆಯ ಮೇಲೆ ಅವಲಂಬಿಸಿದಂತೆ ಭಾಷೆಯ ಬೆಳಿಗೆ ಅವುಗಳ ಮೇಲೆ ಅವಲಂಬಿಸಿರುತ್ತದೆ.

ಭಾಷೆಯು ಒಂದು ಮಾಧ್ಯಮ. ಮಾನವನ ಭಾವನೆ-ವಿಚಾರ-ಆಚಾರಗಳನ್ನು ತಿಳಿಸುವ ಮಾಧ್ಯಮ. ಮಾನವನ ಆಸ್ಥೆ-ಅವಸ್ಥೆಗಳ ಮೇಲೆ ಭಾಷೆಯ ವ್ಯಾಪ್ತಿಯು ರೂಪ ಪಡೆವುದು. ಅನಾಗರಿಕ ಅವಸ್ಥೆಯಲ್ಲಿ ಜೀವನದ ಆಸ್ಥೆಯ ವಿಷಯಗಳು ಕೇವಲ ಬದುಕುವುದು ಆಗಿರುವುದರಿಂದ ಭಾಷೆಗೆ ಸಂಕುಚಿತ ಸ್ವರೂಪವಿರುವುದು. ಮತ-ಪಂಥದ-ಗುಹ್ಯ-ಗೂಢ ತಿಳಿವಳಿಕೆಯ ವಿಷಯಗಳು ಆಗ ಹೆಚ್ಚು ಪ್ರಾಧಾನ್ಯ ಪಡೆವುದರಿಂದ ಭಾಷೆಗೆ ಕ್ಲಿಷ್ಟತೆ ಅಸ್ಪಷ್ಟತೆ ಇರುವುದು ಗೂಢತೆಯು ಆಚಾರ-ವಿಚಾರಗಳ ಮರ್ಮವಾಗಿರುವುದರಿಂದ ಸ್ಪಷ್ಟತೆ ಬೇಕೇ ಆಗದು. ಭಾವನೆಗಳೂ ಅಸ್ಪಷ್ಟ; ವಿಚಾರಗಳೂ ಅಸ್ಪಷ್ಟ; ಆದ್ದರಿಂದ ಹೆಚ್ಚಿನ ಸ್ಪಷ್ಟತೆಯ ಆವಶ್ಯಕತೆಯೆ ಇರದು. ಭಾಷೆಯೂ ಹಾಗೆಯೆ.

ಮಾನವನ ಜೀವನ ವಿಕಾಸವಾದಂತೆ, ಆತ್ಮಿಕ ಒಲವು ವಿಕಾಸವಾದಂತೆ ಜಟಿಲ ಸಮಸ್ಯೆಗಳ ಪರಿಹಾರ ಕಾಂಬುವಾಗ ವಿಚಾರ ಮಂಥನ ನಡೆದು ಅದರಿಂದ ಪದರು ಪದರುಗಳಾಗಿರುವು. ಒಳ ಭಾವನೆಗಳಿಗೆ ಬಾಹ್ಯ ಸ್ಪಷ್ಟತೆಯು ಅಗತ್ಯವಾಗಿ ಭಾಷೆಯು ಬೆಳೆವುದು. ಹೀಗೆ ಭಾಷೆಯ ಇತಿಹಾಸ ನೋಡಬೇಕಾದಾಗ, ಸಾಹಿತ್ಯ, ಗ್ರಾಮ್ಯಭಾಷೆ, ಸಾಹಿತ್ಯವಲ್ಲದ ಭಾಷೆ, ಬರೆವ ಭಾಷೆ, ಮಾತಿನ ಭಾಷೆ, ಇವೆಲ್ಲವನ್ನು ನೋಡಬೇಕಾಗುವುದು. ಇವೆಲ್ಲ

ಭಾಷಾಭ್ಯಾಸದ ಮಾತೃಸ್ಥಾನ ಪಡೆವುವು. ಮೂಲ ಉಗಮಗಳಾಗುವುವು. ಏಂಗಡನೆಗೆ ಆಸ್ಪದವಾಗುವುದು.

ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳ ವಿವರಣೆಯು ಭಾಷೆಯ ಮೂಲಕವಾಗಿ ಆಗಿ ' ಇಂದ್ರಿಯ ' ಜ್ಞಾನದ ವಾಹನವಾಗುವುದು ಭಾಷೆ. ಆಗ ಭಾಷೆಯು ರಚನೆ, ವ್ಯಾಕರಣ, ಛಂಧ, ಬಂಧ, ರೀತಿ, ನೀತಿ ಇವು ಒದಗಿ ಬಂದು ಹಲವಾರು ದೃಷ್ಟಿಗಳ ಉತ್ಪನ್ನವಾಗುವುದು. ಶಬ್ದಭಾಂಡಾರ ಬೆಳೆದಂತೆ ಸರಿಯಾದ, ಸಮಯೋಚಿತವಾದ ವಿಷಯೋಚಿತವಾದ, ಶಬ್ದಗಳ ಆಯ್ಕೆಗೆ ಆಸ್ಪದವುಂಟಾಗುವುದು. ಆಗ ಕಿರಿದರೊಳು ಪಿರಿದರ್ಥಮಂ ತೋರುವ ಸಾಮರ್ಥ್ಯವು ಭಾಷೆಗೆ ಬರುವುದು. ಅದೇ ಕಾವ್ಯದ ಭಾಷೆ. ಆಗ ಭಾಷೆ ಕಾವ್ಯವಾಗುವುದು.

ಇವೇ ಮುಂತಾದ ವಿಚಾರಗಳನ್ನು ಸೋದಾಹರಣವಾಗಿ ೨೫೦ ಪುಟಗಳ ಈ ಪುಸ್ತಕದಲ್ಲಿ ವಿವರಿಸಲಾಗಿದೆ. ಇಂಗ್ಲಿಶ ಭಾಷಾಭ್ಯಾಸಿಗಳಿಗೆ, ಇಂಗ್ಲಿಶ ಕಾವ್ಯದ ಅಭ್ಯಾಸುಗಳಿಗೆ ಮುಖ್ಯವಾಗಿ, ಆನುಷಂಗಿಕವಾಗಿ ಯಾವುದೇ ಭಾಷೆ–ಕಾವ್ಯಗಳ ಅಭ್ಯಾಸುಗಳಿಗೂ ಕೂಡ, ಉಪಯುಕ್ತವಾದ, ಬೆಳಕು ಬೀರುವಂತಹ ಪುಸ್ತಕವಿದು.

ಈ ಪುಸ್ತಕದಿಂದ ವಿನಾಯಕರು ವಿದ್ವಾಂಸರೆಂದು ಪಂಡಿತರೆಂದು ಶಿಕ್ಷಕರೆಂದು ಎದ್ದು ಕಾಣುವರು. ವಿನಾಯಕರ ಅವ್ಯಕ್ತ ಸ್ವರೂಪವನ್ನು ಎತ್ತಿತೋರುವುದು, ಈ ಪುಸ್ತಕವು.

---

## ೯

## ಸ್ಥಾನ-ಮಾನ

ಯಾವುದೊಂದು ವ್ಯಕ್ತಿಯ ಸ್ಥಾನಮಾನವನ್ನು ಇನ್ನೊಂದು ವ್ಯಕ್ತಿಯು ತಿಳಿಯುವುದು ಕಠಿಣ; ಅಳೆಯುವುದು ಇನ್ನೂ ಕಠಿಣ. ಹೀಗೆ ಸ್ಥಾನಮಾನದ ಪ್ರಶ್ನೆ ಬರುವುದು ಎಲ್ಲ ವ್ಯಕ್ತಿಗಳಿಗೆ ಸಂಬಂಧಿಸಿ ಅಲ್ಲವೇ ಅಲ್ಲ. ವ್ಯಕ್ತಿತ್ವವಿಲ್ಲದ ವ್ಯಕ್ತಿಯು ಲೆಕ್ಕಕ್ಕೆ ಬರದು—ಜನಗಣತಿಯ ಹೊರತಾಗಿ. ತಲೆ ಎಣಿಸುವುದು ತಲೆಯ ವಿಷಯ ಬರದೆ ಇದ್ದಾಗ ಮಾತ್ರ. ಆದರೆ ದಿನ ದಿನವೂ ಹೊಸ ಹೊಸ ರೀತಿಯಲ್ಲಿ ಕಾಣಿಸಿಕೊಳ್ಳುವ ವ್ಯಕ್ತಿತ್ವವಿದ್ದ ಜೀವಂತ ವ್ಯಕ್ತಿಯ ಸ್ಥಾನಮಾನವನ್ನು ಕಂಡುಕೊಳ್ಳುವುದು ನಿಜವಾಗಿಯೂ ಅಸಾಧ್ಯವಾದ ಮಾತು.

ಆದರೆ ಅಳೆಯುವುದು ನಡೆದೇ ಇರುವುದು. ಅಳತೆಗೋಲು ಬೇರೆ ಬೇರೆಯೂ ಆಗಬಹುದು. ಎರಡು ವ್ಯಕ್ತಿಗಳು ಸಂಧಿಸಿದಾಗ ಒಬ್ಬರು ಇನ್ನೊಬ್ಬರನ್ನು ಅಳೆದು ನೋಡುವರು. ಕಣ್ಣು ರೂಪವನ್ನು ನೋಡಿದಾಗ ಅಂತರಂಗದ ಶಕ್ತಿ-ಸತ್ವ ಎಷ್ಟಿದೆಯೆಂದು ತಿಳಿಯ ಬಯಸುವುದು. ಕೈಕೈ ಕುಲುಕಿದಾಗ ಕೈ ಶಕ್ತಿ ಎಷ್ಟಿದೆ; ಕೈಯನ್ನು ಆಡಿಸುವ ಶಕ್ತಿ ಎಷ್ಟದೆ ಎಂದು ತೂಗಿ ನೋಡುವುದು. ವ್ಯಕ್ತಿವ್ಯಕ್ತಿಗಳಲ್ಲಿ ಈ ತೂಕದ ಕೆಲಸ ತಾತ್ಪೂರ್ತಿಕವಾಗಿಯೂ ಆಗುವುದು; ಅವರವರ ಸಂಬಂಧದ ಮೇಲೆ ನಿರಂತರವೂ ನಡೆವುದು. ಆದರೆ ಸಾಮಾಜಿಕ ಘನತೆಯನ್ನು ಪಡೆದ ವ್ಯಕ್ತಿಯ ಶಕ್ತಿಯನ್ನು ವ್ಯಕ್ತಿತ್ವವನ್ನು ಇಡಿ ಸಮಾಜವೇ ಅಳೆಯುತ್ತಿರುವುದು. ಸಾಮಾಜಿಕ ಪ್ರಜ್ಞೆಯ ಪ್ರಕಟನೆಯೆ ವ್ಯಕ್ತಿಯ ಗೌರವದ ವ್ಯಾಪ್ತಿ. ಈ ವ್ಯಾಪ್ತಿ ವಿಶಾಲವಾದಷ್ಟು ಗೌರವಧ ಸ್ಥಾನವಾದ ವ್ಯಕ್ತಿಯ ಮಾನ ಹೆಚ್ಚು. ಮಾನ ಎಂದರೆ ಅಳತೆಯಲ್ಲವೆ ? ಈ ಅಳತೆಯು ಗೌರವದ ಅಳತೆ. ಅದಕ್ಕೆ ಮಾನ ಎಂದರೆ ಗೌರವ. ಗೌರವವು ಕೂಡ ಗುರು ಶಬ್ದದಿಂದ ಬಂದುದರಿಂದ ವ್ಯಕ್ತಿಯ-ವ್ಯಕ್ತಿತ್ವದ ಗುರುತ್ವ ಗುರುತ್ವಾಕರ್ಷಣ ಶಕ್ತಿಯನ್ನು ಎತ್ತಿ ತೋರುವುದೇ ಗೌರವದಲ್ಲಿ ಅಡಗಿದ ಸಂಗತಿಯಾಗಿದೆ.

ಸಾಹಿತ್ಯಿಕರೆಂದು ಗೌರವಾದರಗಳಿಗೆ ಪಾತ್ರರೆಂಬುದು ೪೦ನೆಯ ಸಾಹಿತ್ಯ ಸಮ್ಮೇಲನದ ಚುನಾಯಿತ ಅಧ್ಯಕ್ಷರೆಂಬ ಸಂಗತಿಯು ನಿದರ್ಶನವಾಗಿದೆ ಅಂತರ ಪ್ರಾಂತೀಯ ಸಾಹಿತ್ಯಿಕ ಸಮ್ಮೇಲನಗಳಲ್ಲಿ ಅಂತರರಾಷ್ಟ್ರೀಯ ಸಾಹಿತ್ಯ ಸಮ್ಮೇಲನಗಳಲ್ಲಿ ನಮ್ಮ ಪ್ರಾಂತದ ಬಗ್ಗೆ–ನಮ್ಮ ದೇಶದ ಬಗ್ಗೆ ಸಾಹಿತ್ಯಿಕರಾಗಿ, ಪ್ರತಿನಿಧಿಗಳಾಗಿ ಭಾಗ ವಹಿಸಲು ಭಾರತದ ಪಿ. ಇ. ಎನ್. ಸಂಸ್ಥೆಯವರು ಗೋಕಾಕರನ್ನು ಆರಿಸಿರುವುದರಲ್ಲಿ ಅವರ ಸ್ಥಾನದ ಬಗ್ಗೆ ಕಲ್ಪನೆ ಉಂಟಾಗುವುದು. ಜಯಪುರ–ಬಡೋದಾ ಮುಂತಾದ ಕಡೆಗಳಲ್ಲಿ, ಮೊನ್ನೆ ನಡೆದ ಜಪಾನದಲ್ಲಿಯ ಸಮ್ಮೇಲನಗಳಲ್ಲಿ ಭಾಗ ವಹಿಸಿದ್ದಾರೆ. ಭಾರತ ಸರಕಾರದ ಪರವಾಗಿ ಗ್ರಂಥವನ್ನು ಸಂಪಾದಿಸಿಕೊಟ್ಟಿದ್ದಾರೆ. ಹೀಗೆ ಹಲವಾರು ಸ್ಥಾನದಿಂದ, ಆ ಸ್ಥಾನಕ್ಕೆ ಯೋಗ್ಯರೆಂದು ಮಾನ ಪಡೆದುದು ಅವರ ವ್ಯಕ್ತಿತ್ವದ ವೈಶಾಲ್ಯವನ್ನು ತೋರುತ್ತದೆ. ಅಂತರ ಪ್ರಾಂತೀಯ ಮಾನ ಪಡೆದುದನ್ನು ತೋರುತ್ತದೆ.

ಕನ್ನಡ ಸಾಹಿತ್ಯದಲ್ಲಿ ವಿನಾಯಕರಿಗೆ ವಿಶಿಷ್ಟ ಸ್ಥಾನವಿದೆ ಇಲ್ಲಿಯವರೆಗೆ ಅವರು ನಿರ್ಮಿಸಿದ ಸಾಹಿತ್ಯವು ಬಹುಮುಖವೂ ವ್ಯಾಪಕವೂ ಸತ್ವಯುತವೂ ಪ್ರಯೋಗಪೂರಿತವೂ ಆಗಿದೆ. ಕವನ ಸಂಗ್ರಹಗಳು ಪ್ರಕಟವಾದುವು ಹತ್ತು. ನಾಟಕಗಳು ಮೂರು, ಆರು ಭಾಗಗಳಾಗಿ ಪ್ರಕಟವಾಗಿ ಆರೂ ಒಂದಾಗ ಹೊರಬಿದ್ದ ಮಹಾಕಾದಂಬರಿ ಒಂದು. ಪ್ರಬಂಧ-ವಿಮರ್ಶೆಗಳ ಗ್ರಂಥಗಳು ಆರು ಇಂಗ್ಲಿಶ ಭಾಷೆಯಲ್ಲಿ ಕವನ ಸಂಗ್ರಹ ಒಂದು, ಭಾಷಾಶಾಸ್ತ್ರದ ಗ್ರಂಥ ಒಂದು, ವಿವಿಧ ಲೇಖನಗಳು ಹಲವಾರು. ಈ ವ್ಯಾಪ್ತಿಯೆ ಸಾಕ್ಷಿಯಾಗಿ ನುಡಿವುದು-ಅವರ ಸಾಹಿತ್ಯ ನಿರ್ಮಿತಿಗೆ. ವ್ಯಾಪ್ತಿಯ ಮಾತು ಬಹಿರಂಗ ಗಾತ್ರ ಅಂತರಂಗದ ಪಾತ್ರತೆ ಬಗ್ಗೆಯೂ ಸಾಕ್ಷಿಯಾಗಿವೆ ಕೃತಿಗಳು. ಕೃತಿ ರೂಪ ವೈವಿಧ್ಯವು ಒಂದೆಡೆ. ಹೊಸ ಪ್ರಯೋಗಗಳ ಯಶಸ್ಸು ಇನ್ನೊಂದೆಡೆ. ಹೀಗಾಗಿ ಯಾವ ದೃಷ್ಟಿಯಿಂದ ನೋಡಿದರೂ ವಿನಾಯಕರ ಸಾಹಿತ್ಯವು ಜನಮನವನ್ನು ಆಕರ್ಷಿಸುತ್ತದೆ. ಅದು ಅವರಿಗೆ ಮಾನದ ಸ್ಥಾನ ದೊರಕಿಸಿದೆ.

ಈ ಸಾಹಿತ್ಯ ನಿರ್ಮಿತಿಯು ಜೀವನದಲ್ಲಿ ಆನುಷಂಗಿಕವಾಗಿ ಬಂದುದು. ಶಿಕ್ಷಕರಾಗಿ ಕೆಲಸ ಮಾಡುವುದು ಜೀವನ ಧರ್ಮವಾಗಿದೆ. ಉಚ್ಚ ಶಿಕ್ಷಣಾಲ

ಯುದ ಚಿಕಿತ್ಸಕ ಹಾಗೂ ಕೊಂಕು ಬುದ್ಧಿಯ ಪ್ರೌಢ ವಿದ್ಯಾರ್ಥಿಗಳಿಗೆ ಪಾಠ ಹೇಳುವುದು, ಅವರಿಗೆ ಮಾರ್ಗದರ್ಶನ ಮಾಡುವುದು ವಿನಾಯಕರ ಮುಖ್ಯ ಕೆಲಸವಾಗಿ ಜೀವನದ ಉತ್ಸಾಹವೆಲ್ಲ ಅದರಲ್ಲಿ ಉಪಯೋಗವಾಗಿ ಬಿಡುವುದು ಪ್ರಾಚಾರ್ಯರಾಗಿದ್ದುದರಿಂದ ಆಡಳಿತದ ಕಡೆಗೆ, ಅವುಗಳಲ್ಲಿಯ ಸಮಸ್ಯೆಗಳ ಕಡೆಗೆ ಲಕ್ಷ್ಯ ಹಾಕುವುದು ನಿಜವಾಗಿಯೂ ತಲೆಬೇನೆಯ ಕೆಲಸ. ಅಧಿಕಾರಿ ವರ್ಗದವರೊಡನೆ ಕಾಲಕಾಲಕ್ಕೆ ಸಭೆ-ಸಮ್ಮೇಲನ ಸೇರಿ ಶಿಕ್ಷಣಕ್ಕೆ, ಆಡಳಿತಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಚರ್ಚಿಸುವುದು ನೈಮಿತ್ತಿಕವಾದರೂ ನಿತ್ಯ ಕೆಲಸದ ಭಾಗವದು. ಇದೆಲ್ಲ ನೋಡಿದರೆ ಬಿಡುವಿಲ್ಲದ ಜೀವನಕ್ರಮವು ವಿನಾಯಕರದು ಎಂದು ಕಂಡುಬರುವುದು. ಅದರಲ್ಲಿಯೇ ಬಿಡುವು ಮಾಡಿಕೊಂಡು ಮನವನ್ನು ಉಲ್ಲಸಿತವಾಗಿಟ್ಟುಕೊಂಡು ಸಾಹಿತ್ಯ ನಿರ್ಮಾಣ ಮಾಡಲು ಶಕ್ಯವಾದುದು ಅನಾಸಕ್ತಿಯೋಗದ ಲಕ್ಷಣವೆಂದು ಧಾರಾಳವಾಗಿ ಹೇಳಬಹುದು. ಇದು ಅವಿರತ-ನಿತ್ಯೋಪಾಸನೆ ಎಂದೂ ಹೇಳಬಹುದು.

ಈ ಬಗೆಯ ಸಾಧನವು ಸಾಧ್ಯವಾಗಲು ಅವರಲ್ಲಿಯ ಆಧ್ಯಾತ್ಮಿಕ ದೃಷ್ಟಿಯೆ ಕಾರಣ. ಎಳವೆಯಿಂದ ಮೂಡಿ ಬಂದುದನ್ನು ಪಂತಮಹಾರಾಜರ ಪ್ರಭಾವದಿಂದ ಬೆಳೆಸಿಕೊಂಡುದನ್ನು ಶ್ರೀ ಅರವಿಂದರ ಸಹಯೋಗದಿಂದ ಮಾರ್ಗ ಕಂಡು ಜೀವನ ನಡೆಯಿಸುವುದರಲ್ಲಿ ಅವರ ಪುರುಷಾರ್ಥವಿದೆ. ಆಂತರಿಕ ಪ್ರಜ್ಞೆ, ಆತ್ಮವಿಕಾಸ, ಧ್ಯೇಯಸಾಧನೆ ಇವು ಮಾನವನ ಸಂಕುಚಿತ ದೃಷ್ಟಿಯನ್ನು ಇಲ್ಲವಾಗಿಸಿ ಉಚ್ಚ-ಉನ್ನತ ದೃಷ್ಟಿಯನ್ನು ಒದಗಿಸುವುವು. ಅದರಿಂದ ಸಾಮಾನ್ಯನಿಗೆ ಅಸಾಧ್ಯವೆಂದು ಕಂಡುದು ಸಾಧಕನಿಗೆ ಸುಲಭಸಾಧ್ಯವಾಗುವುದು. ಅದರಿಂದ ಸಾಧಕನು ಸಾಮಾನ್ಯನಲ್ಲವೆಂಬದನ್ನು ಸಾರುವುದು. ಅದೇ ವ್ಯಕ್ತಿಯಲ್ಲಿಯ ವ್ಯಕ್ತಿಮತ್ವದ ಬುನಾದಿ. ಈ ಬುನಾದಿಯ ಮೇಲೆ ಎದ್ದು ನಿಂತು ಸಿಂಹಾವಲೋಕನವನ್ನು ಮಾಡುತ್ತಿದ್ದಾರೆ ವಿನಾಯಕರು.

---

## ೧೦

## ಪ್ರತಿಜ್ಞೆ

ವಿನಾಯಕರಿಗೆ ಇನ್ನೂ ೫೦ ವರುಷಗಳಾಗಿಲ್ಲ. ಇದಿನ್ನೂ ಆಯುಷ್ಯದ ಪೂರ್ವ ಭಾಗ. ಪೂರ್ವಭಾವಿಯಾದ ಪೂರ್ವಾಯುಷ್ಯದ ಪರಿಸರ ಪರಿವ್ಯಾಪ್ತಿಯನ್ನು ಕಂಡಾಗ ಮುಂದಿನ ಜೀವನದ ಬಗ್ಗೆ ಉತ್ತರವು ದೊರೆಯುವುದು. ಪ್ರತಿಜ್ಞೆಯನ್ನು ಪೂರೈಸುವ ಕಾಲ ಇನ್ನೂ ಮುಂದಿದೆ. ಪ್ರತಿಜ್ಞೆ ದೊಡ್ಡದಿದೆ ಎಂಬ ಪ್ರಜ್ಞೆ ವಿನಾಯಕರಲ್ಲಿಯೂ ಇದೆ. ಈ ಪ್ರಜ್ಞಾವಿಕಾಸದ ಅರಿವು ಸಮಾಜಕ್ಕೂ ಇದೆ. ವ್ಯಕ್ತಿಯು ಸಾಮಾಜಿಕ ಪ್ರಜ್ಞೆಯನ್ನು ಅಳವಡಿಸಿಕೊಂಡು ಆತ್ಮಪ್ರಜ್ಞೆಯನ್ನು ವಿಕಾಸ ಮಾಡಿಕೊಂಡು, ಆತ್ಮಪ್ರತಿಜ್ಞೆಯ ಮೂಲಕ ಸಾಮಾಜಿಕ ಪ್ರತಿಜ್ಞೆಯನ್ನು ಪೂರೈಸುವನು. ಈ ನಾಲ್ಕು ವಿಭಾಗಗಳು ಏಕ ಮುಖವಾಗಿ, ಏಕಾಂಗವಾಗಿ ಕಂಡು ಬಂದಾಗ ಪ್ರಜ್ಞೆಯ ಪೂರ್ಣ ವಿಕಸನ–ಪ್ರತಿಜ್ಞೆಯ ಪೂರ್ತಿ ಎರಡೂ ಸಾಧಿಸುವುವು. ಇವು ವಿನಾಯಕರ ಜೀವನದಲ್ಲಿ ಒದಗಿ ಬರುವಂತಹ ಪ್ರತಿಜ್ಞೆಯ ಆಶ್ವಾಸನವು ಪ್ರಜ್ಞೆಯಲ್ಲಿ ಮೂಡಿದೆ. ಮೂಡಿದುದು ಬೆಳೆದು ಆಶ್ವಾಸನವು ಫಲಿಸಲಿ ಎಂದು ಹಾರೈಕೆ.

---

## —ಶ್ರೀ. ನೆಗಳೂರ ರಂಗನಾಥರು

ನೆರಂಗ—ಇದು ಶ್ರೀ. ನೆಗಳೂರ ರಂಗನಾಥರ ಕಾವ್ಯನಾಮ. ಆಡು ಮುಟ್ಟದ ಸೊಪ್ಪಿಲ್ಲ— ನೆರಂಗರು ಕೈಯಾಡಿಸದ ಸಾಹಿತ್ಯ ಕ್ಷೇತ್ರವಿಲ್ಲ— ಎನ್ನುವಷ್ಟು ವಿಶಾಲವಾಗಿದೆ, ಅವರ ಬರವಣಿಗೆಯಲ್ಲಿಯ ವೈವಿಧ್ಯ. ಕಾವ್ಯ ದಿಂದ ಮೊದಲು ಮಾಡಿಕೊಂಡು, ಅರ್ಥ ಶಾಸ್ತ್ರದ ವರೆಗೆ, ನಾಟಕ ರಂಗ ದಿಂದ— ಕಾನೂನದ ಜಟಿಲ ಸಮಸ್ಯೆಯ ವರೆಗೆ ಅವರು ಹರಿದಾಡಿದ್ದಾರೆ. ವೃತ್ತಿಯಿಂದ ವಕೀಲರಾದರೂ ಅವರ ಮೂಲಪಿಂಡ ಶಿಕ್ಷಕ-ಸಾಹಿತಿಯದು. ಶಿಕ್ಷಣರಂಗ-ಸಾಹಿತ್ಯ ಕ್ಷೇತ್ರ ಪತ್ರಿಕಾ ವ್ಯವಸಾಯದಲ್ಲಿ ನೆಲೆ ಸಿಲ್ಲಬೇಕೆಂದು ಅವರು ಬಯಸಿ ಹೋರಾಡಿದರೂ ವಿಫಲರಾಗಿ — ಈಗ ವಕೀಲಿಯ ವ್ಯವ ಸಾಯ ರಂಗದಲ್ಲಿ ಜೀವನ ಸಾಫಲ್ಯವನ್ನು ಪಡೆಯ ತೊಡಗಿದ್ದಾರೆ.

ವಕೀಲಿ ಅವರ ಜೀವನೋಪಾಯವಾದರೆ — ಸಾಹಿತ್ಯ "ಚಟ" ವೆಂದು— ಬೆನ್ನು ಬಿಡದೆ ಪೂರ್ವ ಕರ್ಮದಂತೆ ಅಂಟಿಕೊಂಡಿದೆ. ಅವರಿಗೆ ಹೆಸ ರನ್ನು ಗಳಿಸಿ ಕೊಟ್ಟಿದೆ. ಅವರ ಪ್ರಕಟಿತ ಸಾಹಿತ್ಯ ಕೃತಿಗಳ ಸಂಖ್ಯೆ ಇಪ್ಪತ್ತೈದಕ್ಕೆ ಮೇಲ್ಪಟ್ಟಿದೆ.

ಎಂ. ಎ. ಬಿ. ಟಿ. ಎಲ್. ಎಲ್. ಬಿ. ಈ ಪದವಿಗಳ ಮಾಲೆಯನ್ನು ಅವರು ಇನ್ನೂ ಹೆಣೆಯುತ್ತಿದ್ದರೋ ಏನೋ— ವಕೀಲಿಯ ವ್ಯವಸಾಯದಲ್ಲಿ ಚಿರಸ್ಥಾಯಿಯಾಗಿರದಿದ್ದರೆ—ಕನ್ನಡದಲ್ಲಿ ಪ್ರಥಿತ ಯಶ ಲೇಖಕರಾದರೂ- ಯಾವ ಪರೀಕ್ಷೆಯಲ್ಲೂ ಕನ್ನಡ ಅವರ ಐಚ್ಛಿಕ ವಿಷಯವಾಗಿರಲಿಲ್ಲ. ಅರ್ಥ ಶಾಸ್ತ್ರ—ಸಮಾಜ ಶಾಸ್ತ್ರ— ಇತಿಹಾಸ ಇವೇ ಅವರ ಪ್ರೀತಿಯ ವಿಷಯಗಳಾ ಗಿದ್ದವು. ಅವರ ಬರವಣಿಗೆಯ ಒಲವೂ ಇದೇ ವಿಷಯಗಳ ಕಡೆಗೆ ವಿಶೇಷ ವಾಗಿದೆ.